


# ಹಿಂಗಾರ



ಅರೆಭಾಷೆ ತ್ರೈಮಾಸಿಕ


ಸಂಪುಟ–1 ಸಂಚಿಕೆ– 3 ದಿನಾಂಕ : 10-2-2017 ಕೊಡಗು ರೂ.20/–


ಬೆಣ್ತೆಂಗ –ಜಾಲ್ತೆ– ಪೆರಾರ್ತೆ ತಿಂಗ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




16.10.2016, ಮದ್ವೆ ಅಂದ್-ಇಂದ್ ಪಟ್ಟಾಂಗ- ಚೆಂಬು



26.11.2016 –, ಸಾಂಸ್ಕೃತಿಕ ಪ್ರದರ್ಶನ – ಬೆಂಗಳೂರು




31.10.2016, ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ ಹುತಾತ್ಮ ದಿನಾಚರಣೆ- ಮಡಿಕೇರಿ



7.12.2016, ಪ್ರಾಧಿಕಾರ ಮತ್ತು ಅಕಾಡೆಮಿಗಳ ಸಂಯುಕ್ತಾಶ್ರಯದಲ್ಲಿ
ಸಂಗಮ-ಸಂಭ್ರಮ 2016 – ಮಡಿಕೇರಿ



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ



ಪ್ರಧಾನ ಸಂಪಾದಕರ್

**ಕೊಲ್ಯದ ಗಿರೀಶ್**

ಸಂಪಾದಕರ್

**ಡಾ. ಪೂವಪ್ಪ ಕಣಿಯೂರು**

**ಮೋಹನ ಸೋನ**

ವ್ಯವಸ್ಥಾಪಕ ಸಂಪಾದಕರ್

**ಉಮರಬ್ಬ**



**HINGARA**
A Quarterly Magazine

Vol -1, Issue - 3

Date : 10-02-2017

Page : 76

Copies : 500

RNI No. : KARARB / 2016 / 69571

Price : Rs. 20/-

KODAGU

Cover Design : Vinay & Lohith, Bangalore

Art By : Mohan Sona.



Printed by UMARABBA on behalf of Registrar, Karnataka Arebhase Samskruthi Mathu Sahithya Academy, and Published by UMARABBA on behalf of Registrar, Karnataka Arebhase Samskruthi Mathu Sahithya Academy on behalf of KARNATAKA AREBHASE SAMSKRUTHI MATHU SAHITHYA ACADEMY (Name of the Woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

www.arebhasheacademy.com. Email : arebaseacademy@gmail.com.

# ಅಧ್ಯಕ್ಷರ ನುಡಿ

ಹಿಂಗಾರ ತ್ರೈಮಾಸಿಕ ಪುಸ್ತಕಕ್ಕೆ RNI [REGISTRAR OF NEWSPAPERS FOR INDIA] ಮಾನ್ಯತೆ ಸಿಕ್ಕಿಟ್ಟು ಅರೆಬಾಸೆ ಪತ್ರಿಕೆ RNI ಶುರುನ ಮಾನ್ಯತೆ ಪಡ್ದದ್ ಹಿಂಗಾರದ ಹೆಗ್ಗಳಿಕೆ. ಹಿಂಗಾರದ ಚಂದದಾರರ್ ಹೆಚಾಗ್ತ ಇರ್ದು ಅರೆಬಾಸೆ ಬೆಳವಣಿಗೆಗೆ ಪೂರಕ, ಹಂಗೇ ಬಾಷಿಕರಲ್ಲಿ ಸಾಹಿತ್ಯ ಆಸಕ್ತಿ ನೋಡ್ರೆ ನಿಜಕ್ಕೂ ಖುಷಿಯಾದೆ.

ಬೆಣ್ತಿಂಗ -ಜಾಲ್ತ- ಪೆರಾರ್ತೆ ಈ 3 ತಿಂಗಲಿ ಅಕಾಡೆಮಿ ವತಿಂದ ಸಾಕಷ್ಟ್ ಕಾರ್ಯಕ್ರಮ ಮಾಡ್ದೊ, ಸಾಹಿತ್ಯ ಗ್ರಾಮ ಚೆಂಬು ಇಲ್ಲಿ ಅರೆಬಾಸೆ ಸಾಂಸ್ಕೃತಿಕ ಸಿರಿ ಮತ್ತೆ ಸಾಹಿತ್ಯ ಸುಗ್ಗಿಯ ಕೂಡುಕೂಟ ಕಾರ್ಯಕ್ರಮ ನಡ್ಸಿದೊ. ಇದರ್ಲಿ ನಡ್ದ "ಚೌಕಿಲಿ ಪಟ್ಟಾಂಗ" ಕಾರ್ಯಕ್ರಮ ಸೇರ್ದ ಅಷ್ಟ್ ಜನ್ರ ಮನ ಸೆಳ್ತ್, ಅಕ್ಟೋಬರ್ 31 ರಂದ್ ಸ್ವಾತಂತ್ರ್ಯ ಹೋರಾಟಗಾರ ಸುಭೇದಾರ್ ಅಪ್ಪಯ್ಯಗೌಡರ್ನ ನೆನ್ಸಿಕಣ್‌ವ ಕಾರ್ಯಕ್ರಮ ಮಡಿಕೇರಿ ಕೋಟೆ ಆವರಣಲಿ ನಡ್ತ್. ವಸತಿ ಸಚಿವ ಶ್ರೀ ಎಂ. ಕೃಷ್ಣಪ್ಪನವು, ಜನಪ್ರತಿನಿಧಿಗ ಕಾರ್ಯಕ್ರಮಕ್ಕೆ ಬಂದ್ ಶುಭ ಹಾರೈಸಿದೊ.

2015ನೇ ಸಾಲ್‌ನ ಗೌರವ ಪ್ರಶಸ್ತಿಗೆ ಭಾಜನರಾದ ಶ್ರೀ ಟಿ.ಜಿ. ಮೂಡೂರು, ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಗೀತಾ ಮೋಂಟಡ್ಕ ಇವ್ಕೆ ಬೆಂಗಳೂರ್‌ನ ರವೀಂದ್ರ ಕಲಾಕ್ಷೇತ್ರಲಿ ಪ್ರಶಸ್ತಿ ನೀಡಿ ಗೌಭರವಿಸಿದ್ದೊ, ಸನ್ಮಾನ್ಯ ಕೇಂದ್ರ ಸಚಿವರಾದ ಶ್ರೀ ಸದಾನಂದ ಗೌಡ, ವಸತಿ ಸಚಿವ ಶ್ರೀ ಕೃಷ್ಣಪ್ಪ, ಶಾಸಕರಾದ ಶ್ರೀ ಕೆ.ಜಿ. ಬೋಪಯ್ಯ, ಶ್ರೀ ವಾಸುನವು ಕಾರ್ಯಕ್ರಮಕ್ಕೆ ಮತ್ತೆ ಪ್ರಶಸ್ತಿ ಭಾಜನರಾದವ್ಕೆ ಶುಭ ಹಾರೈಸಿದೊ.

ಡಿಸೆಂಬರ್ ತಿಂಗಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇದರ ಅಧೀನಲಿ ರಾಜ್ಯದ ಎಲ್ಲಾ ಅಕಾಡೆಮಿ, ಪ್ರಾಧಿಕಾರಗಳ ಸಹಯೋಗಲಿ "ಸಂಗಮ ಸಂಭ್ರಮ" ಕಾರ್ಯಕ್ರಮ ಮಡಿಕೇರಿಲಿ ಏರ್ಪಡಿಸಿದ್ದೊ. ಭಾಷಾ ಬಾಂದವ್ಯ ಸಂವಾದ ಕಾರ್ಯಕ್ರಮಕ್ಕೆ ಮೆರುಗು ಕೊಡ್ತ್.

ಮಡಿಕೇರಿಲಿ ಏರ್ಪಡಿಸಿದ್ದೊ. ಭಾಷಾ ಬಾಂದವ್ಯ ಸಂವಾದ ಕಾರ್ಯಕ್ರಮಕ್ಕೆ ಮೆರುಗು ಕೊಡ್ತ್.

ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಮ್ಮೇಳನ ಗೌಜಿ–2016, ರಾಜ್ಯಮಟ್ಟದ ಸಮ್ಮೇಳನ ಸುಳ್ಯಲಿ ಭಾರಿ ಗೌಜಿಲಿ ನಡ್ತ್. ಸಾಕಷ್ಟ್ ಯುವ ಪ್ರತಿಭೆಗಳಿಗೆ ಸಾಹಿತ್ಯ ಮತ್ತೆ ಸಾಂಸ್ಕೃತಿಕ ಕಾರ್ಯಕ್ರಮಲಿ ಅವಕಾಶ ಸಿಕ್ಕಿತ್, ಡಿಸೆಂಬರ್ 15 ರಂದ್ ನಮ್ಮ ಅಕಾಡೆಮಿ ಸ್ಥಾಪನೆ ಆದ್, ಅಂದ್ ಮಡಿಕೇರಿ ಗೌಡ ಸಮಾಜಲಿ ಅರೆಬಾಸೆ ಸೌಹಾರ್ದ ದಿನ ಆಚರಣೆ ಮಾಡ್ದೊ, ಅರೆಬಾಸಿಕರಿಗೆ ಅಕಾಡೆಮಿಯ ಅವಶ್ಯಕತೆ ಹಂಗೆ ಭಾಷಿಕ ಸಾಹಿತ್ಯ ಸಂಸ್ಕೃತಿನ ಬೆಳ್ಸುವ ಬಗ್ಗೆ ಪೂರಕ ಚರ್ಚೆ ಆತ್.

ಚೇರಂಬಾಣೆ **ಎಬಿವಿ** ಸಂಘದವು ನಡ್ಸಿದ 10ನೇ ವಾರ್ಷಿಕೋತ್ಸವ ಕಾರ್ಯಕ್ರಮ ವಿಜಯದಶಮಿ ಪ್ರಯುಕ್ತ ಮಡಿಕೇರಿ ಗಾಂಧಿ ಮೈದಾನಲಿ ನಡ್ದ **ದಸರಾ ಜನೋತ್ಸವ** ಕಾರ್ಯಕ್ರಮ, ಸವಣೂರ್‌ಲಿ ನಡ್ದ **"ಕಲಾರಶ್ಮಿ–2016"** ಕಾರ್ಯಕ್ರಮ, ಮೋಡಲ್ ಎಜುಕೇಷನ್ ಟ್ರಸ್ಟ್ (ರಿ) ಸುಳ್ಯ ಇವ್ ನಡ್ಸಿದ **ಗ್ರೀನ್ ವ್ಯೂ ಮಕ್ಕಳ ಹಬ್ಬ–2016** ಕಾರ್ಯಕ್ರಮ, ಮಹಿಳಾ ಮತ್ತೆ ಮಕ್ಕಳ ಅಭಿವೃದ್ಧಿ ಇಲಾಖೆ ಕಬ್ಬನ್ ಪಾರ್ಕ್ ಬೆಂಗಳೂರು ಇಲ್ಲಿ ನಡ್ಸಿದ **2016 ಮಕ್ಕಳ ಹಬ್ಬ** ಕಾರ್ಯಕ್ರಮ, ವಿರಾಜಪೇಟೆ ಕನ್ನಡ ಸಾಹಿತ್ಯ ಪರಿಷತ್ ಇವ್ ನಡ್ಸಿದ 7ನೇ ಕನ್ನಡ ಸಾಹಿತ್ಯ ಸಮ್ಮೇಳನ ಕಾರ್ಯಕ್ರಮ, **ಕೊಡಗಿನ ಹುತ್ತರಿ ಹಬ್ಬ** ಕಾರ್ಯಕ್ರಮ ಮಂಗಳೂರ್‌ಲಿ ನಡ್ದ **"ಕರಾವಳಿ ಉತ್ಸವ"** ಕಾರ್ಯಕ್ರಮ, ಸುಳ್ಯಲಿ ನಡ್ದ **ಕೆ.ವಿ.ಜಿ. ಸುಳ್ಯ ಹಬ್ಬ**, ಈ ಎಲ್ಲಾ ಕಾರ್ಯಕ್ರಮಗಳಿಗೆ ಅಕಾಡೆಮಿಂದ ಅರೆಬಾಷೆ ಸಾಂಸ್ಕೃತಿಕ ಕಲಾತಂಡಗಳ್ನ ಪ್ರಾಯೋಜಿಸಿದ್ದೊ, ಸುಳ್ಯ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಇವ್ ನಡ್ಸಿದ **"ಚಿತ್ರಕಲಾ ಸಂಭ್ರಮ"** ಕಾರ್ಯಕ್ರಮ ಅಕಾಡೆಮಿ ಪ್ರಾಯೋಜಕತ್ವಲಿ ನಡ್ತ್.

ಮಡಿಕೇರಿ ಆಕಾಶವಾಣೀಲಿ ಪ್ರಸಾರ ಆಗ್‌ವ ಭಾಷಾವಾರ್ತೆ **ಸುದ್ದಿಜೊಂಪೆ** ಅಕಾಡೆಮಿ ಪ್ರಾಯೋಜಕತ್ವಲಿ ಬರ್‍ತಾವುಟ್ಟು.

ಅಕಾಡೆಮಿ ಶ್ರೇಯಸ್ಸಿಗೆ ದುಡಿತಾ ಇರ್‍ವ ಎಲ್ಲಾ ಸದಸ್ಯರಿಗೂ ಪುಸ್ತಕ ಪ್ರಕಟಣೆ ಸಮಿತಿ ಹಂಗೆ ಹಿಂಗಾರ ಪ್ರಕಟಣೆ ಸಮಿತಿಯ ಸದಸ್ಯರಿಗೂ ಎಲ್ಲಾ ಓದುಗರಿಗೂ ನನ್ನ ವೈಯುಕ್ತಿಕ ಕೃತಜ್ಞತೆ ತಿಳ್ಸ್‌ತಾ ಒಳೇ.

**10.2.2017** – ಕೊಲ್ಯದ ಗಿರೀಶ್

## ಸಂಪಾದಕೀಯ...

ಇದ್ ನಮ್ಮ ಅರೆಭಾಷೆ ಅಕಾಡೆಮಿನ ನಿಮ್ಮ ನೆಚ್ಚಿನ 6ನೇ ತ್ರೈಮಾಸಿಕ ಸಂಚಿಕೆ. ಈ ಹಿಂದೆನ ಸಂಚಿಕೆನ ನೀವೆಲ್ಲಾ ಪ್ರೀತಿಂದ ಸ್ವೀಕರಿಸ್ಯೊಳರಿ. ನಾವ್ಗೆ ಇದ್ ಸಂತೋಷದ ಸಂಗತಿ. ನಿಮ್ಮ ಮೆಚ್ಚಿಕೆನ ನಾವ್ಗೆ ಬರವಣಿಗೆನ ಕಳ್ಸಿ ಕೊಡ್ದರ ಮೂಲಕ ತೋರ್ಸ್ತಾ ಒಳರಿ. ನಮ್ಮ ನಿರೀಕ್ಷೆನ ನೀವ್ಗ ನಿರಾಸೆಗೊಳ್ಸಿಲ್ಲೆ. ಇನ್ನ್‌ನೂ ಸ ಇದರ ನಿರೀಕ್ಷಿಸ್ತಾ ಒಳೊ.

ಈ ಸಂಚಿಕೆಲಿ ನಾವು ಬೆಂತ್ತಿಂಗ ಜಾಲ್ತೆ, ಹಾಂಗೆ ಪೆರಾರ್ತೆ ತಿಂಗ ಮುಟ್ಟ ಅಕಾಡೆಮಿ ನಡ್ಸಿದ ಜಂಬರಗ ದಾಖಲೆ ಮಾಡ್ದರೊಟ್ಟಿಗೆ ಜಂಬರದ ಅವಲೋಕನ ಮಾಡ್ವ ಪ್ರಯತ್ನನೂ ಮಾಡ್ಯೊಳೊ. ನಾವು ಈ ತಿಂಗಳ್ಲಿ ಹಲವು ಜಂಬರನ ನಡ್ಸಿಯೊಳೊ. ಕೊಡ್ಗ್‌ನ ಮಡಿಕೇರಿಲಿ ಸಂಗಮ ಸಂಭ್ರಮ ಕಾರ್ಯಕ್ರಮನ ಕೊಡವ ಅಕಾಡೆಮಿನ ಆಶ್ರಯಲಿ ಬೇರೆ ಬೇರೆ ಅಕಾಡೆಮಿನ ಸಹಕಾರಲಿ ಯಶಸ್ವಿ ಆಗಿ ನಡ್ಸಿಯೊಳೊ. 2015 ನೇ ಸಾಲ್ನ ಗೌರವ ಪ್ರಶಸ್ತಿ ಪ್ರಧಾನ ಸಮಾರಂಭನ ಬೆಂಗ್ಳೂರ್‌ನ ರವೀಂದ್ರ ಕಲಾಕ್ಷೇತ್ರಲಿ, ದಕ್ಷಿಣ ಕನ್ನಡ ಹಾಂಗೆ ಕೊಡ್ಗ್ ಗೌಡ ಸಂಘದ ಹಾಗೂ ಕೊಡ್ಗ್ ಗೌಡ ಸಮುದಾಯನ ಸಹಕಾರಲಿ ಪೊರ್ಲ್‌ಲಿ ನಡ್ಸಿಯೊಳೊ. ನಮ್ಮ ಬಹು ನಿರೀಕ್ಷಿತ ಗೌಜಿ-2016ರ ಕಾರ್ಯನ ಸುಳ್ಯ ಗೌಡ ಸಮುದಾಯಭವನಲಿ ಯುವ ಗೌಡ ಸೇವಾ ಸಂಘ (ರಿ)ಲಿ ವ್ಯವಸ್ಥೆಗೊಳ್ಸಿದ್ ಜನ ಮೆಚ್ಚುಗೆಗೆ ಪಾತ್ರ ಆಗುಟು. ಇದೆ ಅವಧಿಲಿ ಅಕಾಡೆಮಿ ನಾಟಕಕಲಿಕಾ ಶಿಬಿರನ ನಡ್ಸಿಟ್ಟು. ಬೇರೆ ಬೇರೆ ಸಂಗ ಸಂಸ್ಥೆಗ ನಡ್ಸಿದ ಸಾಂಸ್ಕೃತಿಕ ಕಾರ್ಯಕ್ರಮಕೆ ಧನ ಸಹಾಯ, ಸಾಂಸ್ಕೃತಿಕ ತಂಡಗಳ ಪ್ರಾಯೋಜಕತ್ವಗಳ ಕೊಟ್ಟ್ ಸಹಕರಿಸ್ಯೊಳೊ

ಬೆಂತ್ತಿಂಗ, ಜಾಲ್ತೆ ಹಾಂಗೆ ಪೆರಾರ್ದೆ ತಿಂಗ್ಳ್‌ಗ ಅರೆಭಾಷಾ ಸಮುದಾಯಕ್ಕೆ ಬಹಳ ಮುಖ್ಯ ತಿಂಗ್ಳ್‌ಗ ಆಗ್ಯೊಳೊ. ಭತ್ತ ಬೆಳೆವ ಒಕ್ಕಲ್ ಮಕ್ಳಿಗೆ ಬೆನ್ನಿ ಬೇಸಾಯ ಜರೂರುನ ಕಾಲ. ಬೆಳೆದ ಭತ್ತ ಮನೆ - ಮನೆಗಳ್ಲಿ ತುಂಬುವ ಕಾಲ. ಹಾಂಗೆ ಹಲ ಹಬ್ಬ- ಹರಿದಿನಗ ಕೂಡ ಇರ್ವ ಕಾಲ. ಗದ್ದೆ ಉಳುಮೆ ಮಾಡಿ ಎರ್ಡನೇ ಸುಗ್ಗಿ ತಿಂಗದ ಬೆಳೆನ ಮಾಡ್ವ ಸಂಭ್ರಮ ಗದ್ದೆ ಕೋರಿ, ದೀಪಾವಳಿ ಹಬ್ಬನ ಆಚರಿಸ್ಯೊಳ. ಕೈಲ್‌ಪೊದು, ಹುತ್ತರಿ ಆಚರಿಸಿ ಕೋಲಾಟ ಆಡ್ಯೊಳೊ. 'ಬಲಿ' ಪುರುಷನ ದೀಪೊಲಿ ಮರ ಹಾಕಿ ಕೂ. 'ಕೂ'ಂತೇಳಿ ಕರಕೊಂಡಳೊ. ಸಿರಿ ಸಂಪತ್ತ್ ಮನೆ ಸೇರ್ಸಿಕೊಂಡ ಶುಭ ಹಾರೈಕೆಲಿ ಸಂಭ್ರಮಿಸ್ಯೊಳೊ. ಮಲೆನಾಡ ಸಿರಿ ಬೆಳೆದ ಕಾಫಿ ಕೊಯ್ಯಕ್ಕೆ ಸುರು ಹಚ್ಚಿಕೊಂಡಳೊ. ಒಟ್ಟಾರೆ ಆಟಿ ತಿಂಗಳಲ್ಲಿ ಕಂಡುಂಡ ಬರಗಾಲನ ಮೀರಿ ಐಸಿರಿಯ ಕಾಲಕ್ಕೆ ಜಾರಿಕೊಂಡ ಸಂದರ್ಭಲಿ ಜಂಬರಗ ನಡ್ದ್ ಅಕಾಡೆಮಿಗೂ ಸಾರ್ಥಕ್ಯ ಭಾವ ಬಂದುಟು ಅಂತ ಹೇಳಿ ಕಂಬೋದು ನಾವ್ಗೆ ಇನ್ನಷ್ಟು ಸಂಭ್ರಮ.

ನಾಡ್‌ಲಿ ಊರ ಜಾತ್ರೆಗ, ದೈವಗಳ ಮಾಡಲಿ ವರ್ಷಾವಧಿ ನೇಮ – ಕೋಲಗ, ಸೀಮೆ ಬಂಡಿಗ ಜರುಗುತ್ತಿರುವ ಕಾಲಲಿ ಊರು ನಿಂತುಟು. ಅಕಾಡೆಮಿನೂ ಈ ಕಾಲಾವರ್ತನದ ಸಂಕ್ರಮಣಲಿ ಇನ್ನಷ್ಟು ಜಂಬರಗ ನಡ್ಲೊಕುಂತೇಳ್ವ ಹುರುಪುಲಿ ಉಟ್ಟು.

ಈ ಹಿಂಗಾರ ಸಂಕಲನಲಿ ಕತೆ, ಕವನ, ಸಂಸ್ಕೃತಿ– ಚರಿತ್ರೆ, ಚಿಂತನೆಗ, ಹರಟೆ– ಪ್ರಬಂಧಂತೇಳ್ವ ಬರಹಗನ ಸಂಕಲ್‌ಸ್ಯೊಳೊ. ನಮ್ಮ ಅರೆಭಾಷಿಕ ಬರಹಗಾರರ್ ಈ ಬಗೆನ ಬರಹಗ ಬರೆನಿಂತೇಳಿ ನಾವು ಕೇಳಿಕಂಡ ಹಾಂಗೆ ಬರ್ದ್ ಕಳ್ಸಿಯೊಳೊ. ಈ ಸಂಚಿಕೆಗೆ ಹಿರಿಯರೊಟ್ಟಿಗೆ ಕಿರಿಯವು ಹೆಚ್ಚೆ ಬರ್ದ್ದೊಳೊ. ಇಂದ್ ಕಿರಿಯವು ಓದುದುಲೆ, ಬರೆಯೊದಿಲ್ಲೆಂತೇಳ್ವ ಸಂದರ್ಭಲಿ ನಾವ್ಗೆ ಇದ್ ಆಶಾ ದಾಯಕ ಸಂಗತಿ. ಸುಳ್ಯಲಿ ನಡ್ದ ಗೌಜಿ–2016 ಜಂಬರಲ್ಲಿ ನಡ್ದ ಕವಿಗೋಷ್ಠಿಲಿ ಓದಿದ ಕವನನ ಇತರರ ಕವನಗಳೊಟ್ಟಿಗೆ ಇಲ್ಲಿ ಸಂಕಲಿಸ್ಯೊಳೊ. ಸಂಚಿಕೆನ ಮೌಲ್ಯ ಹೆಚ್ಚಿಸುವ ಉದ್ದೇಶಲಿ ಕೆಲ ವೈಚಾರಿಕ ಸಂಶೋಧನಾತ್ಮಕ ಲೇಖನ ಸ ಸೇರಿಸಿಕೊಂಡೊಳೊ. ಅರೆಭಾಷಿಕ ಸಮುದಾಯನ ಚಾರಿತ್ರಿಕ – ಸಾಂಸ್ಕೃತಿಕ ಮಹತ್ವವುಳ್ಳ ಲೇಖನಗ ಮುಂದಿನ ಸಂಚಿಕೆಲಿ ಹೆಚ್ಚೆಚ್ಚು ಬರೊಕುಂತೇಳಿ ಅನಿಸ್ತಾವುಟ್ಟು. ಈ ದೃಷ್ಟಿಲಿ ನಮ್ಮ ಬರಹಗಾರರ್ ಯೋಚಿಸೊಕು. ಪ್ರತಿ ಸಂಚಿಕೆಲಿ ಒಬ್ಬ ಹಿರಿಯ ವಿದ್ವಾಂಸರ, ಕಲಾವಿದ ಅಲ್ಲರೆ ಸಾಮಾಜಿಕ ವ್ಯಕ್ತಿನ ಪರಿಚಯ ಇರೊಕೊಂತೇಳ್ವ ಇರಾದೆಲಿ ಈ ಸರ್ತಿನ ಸಂಚಿಕೆಲಿ ಹಿರಿಯರಾದ ಬಹುಶ್ರುತ ಜಾನಪದ ವಿದ್ವಾಂಸ ಡಿ.ಜಿ. ನಡ್ಕನವರ ಕುರ್ತ್ ಶ್ರೀಮತಿ ಸರೋಜ ಎಂ.ಟಿ. ಬರ್ದ ಲೇಖನ ಸಂಕಲನ ಆವುಟು.

ಈ ಸಂಚಿಕೆನ ಹೊರ ತಾಕೆ ಅಕಾಡೆಮಿ ಅಧ್ಯಕ್ಷರ್, ರಿಜಿಸ್ಟ್ರಾರ್, ಸರ್ವ ಸದಸ್ಯರ್ ಸಹಕರಿಸ್ಯೊಳೊ. ಬರಹಗಾರರ್ ಮುತುವರ್ಜಿ ಮತ್ತು ಭಾಷೆನ ಪ್ರೀತಿಲಿ ತಮ್ಮ ಲೇಖನಗ ನೀಡಿ ಸಂಚಿಕೆನ ಮೌಲ್ಯ ಹೆಚ್ಚಿಸ್ಯೊಳೊ. ಸಂಚಿಕೆನ ಮುಖಪುಟ ವಿನ್ಯಾಸ ಮಾಡ್ದ ವಿನಯ್ ಮತ್ತು ಲೋಹಿತ್ ಬೆಂಗಳೂರು, ಪ್ರಿಂಟ್ ಹಾಕುವಲ್ಲಿ ಸಹಕರ್ಸಿದ ಮಡಿಕೇರಿನ ಶ್ರೀಕೃಷ್ಣ ಕಂಪ್ಯೂಟರ್ ಮತ್ತು ಪ್ರಿಂಟರ್ಸ್‌ನವುಕೆ, ಅಕ್ಷರ ಜೋಡಣೆಲಿ ಸಹಕರಿಸಿದ ಚೆನ್ನಕೇಶವ ಡಿ.ಟಿ.ಪಿ. ಮತ್ತೆ ಜೆರಾಕ್ಸ್ ಸೆಂಟರ್‌ನ ಶ್ರೀಮತಿ ಪುಷ್ಪಲತಾ ಎ., ಅಕಾಡೆಮಿ ಸಿಬ್ಬಂದಿ ಶ್ರೀಮತಿ ಜ್ಯೋತಿ, ಪ್ರತಿ ತಿದ್ದುವಲ್ಲಿ ಸರೋಜ ಪಿ. ಕಣಿಯೂರು, ಎಂ.ಜಿ. ಕಾವೇರಮ್ಮ, ಸಂಪಾದಕತ್ವದಲ್ಲಿ ಮತ್ತು ಕಲಾತ್ಮಕ ಚಿತ್ರಗಳನ್ನು ರಚಿಸಿರುವ ಮೋಹನ ಸೋನ ಕೈ ಜೊಡ್ಸಿಯೊಳೊ. ಸಹಕರಿಸಿದ ಎಲ್ಲೊವ್ಕೆನೂ ತುಂಬು ಹೃದಯದ ಕೃತಜ್ಞತೆಗ.

ತಾ. 10.02.2017 **ಡಾ. ಪೂವಪ್ಪ ಕಣಿಯೂರು**



# ಹಿಂಗಾರ
# ಒಳ್ಸ್‌ಕನ

ಲಲಿತ ಪ್ರಬಂಧಗ



ಚಿಂತನೆ



ಅಡುಗೆ

ವ್ಯಕ್ತಿ ಪರಿಚಯ

# ಬಹುಶ್ರುತ ವಿದ್ವಾಂಸರ್ ಡಿ.ಜಿ. ನಡ್ಕ

ಶ್ರೀಮತಿ ಸರೋಜ ಎಂ.ಟಿ.

ಡಿ.ಜಿ. ನಡ್ಕ ಕಾವ್ಯನಾಮಲಿ ಹೆಸ್ರ್ ಪಡ್ದಿರುವ ಎನ್. ಧರ್ಮಪಾಲ ಗೌಡ ಇವು ಮೌಖಿಕ ಇತಿಹಾಸನ ಮ್ಯೆಮನಗಳ್ಲಿ ಮ್ಯೆಗೂಡ್ಸಿಕೊಂಡಿರುವ ಅಪರೂಪದ ವ್ಯಕ್ತಿ ಆಗೊಲೊ. ಇವು ವೃತ್ತಿಲಿ ಶಾಲಾ ಅಧ್ಯಾಪಕರಾಗಿ ನಿವೃತರ್. ಪ್ರವೃತ್ತಿಲಿ ಬರಹಗಾರ್ರ್, ನಾಟಕಗಾರ್ರ್ ಅವೆಲ್ಲವುಕ್ಕಿಂತ ಜಾನಪದ ವಿಷಯಲಿ ಅಧಿಕೃತ ಸಂಪನ್ಮೂಲರ್. ಈ ವಿಷಯಲಿ ಸಂಶೋಧಕರಾಗಿ ಎಲ್ಲವುಕ್ಕೂ ಚಿರಪಚಿತರ್. ಹಲ ಜನ ಸಂಶೋಧಕರ್‌ಗೆ ಖಚಿತ ಮಾಹಿತಿದಾರ ವರ್ಕ್ತ್ಯ ಆಗಿ ಹೆಸರ್ ಬರವಂಗೆ ಮಾಡಿ ತಾನ್ ಮಾತ್ರ ಹಿಂದೆ ಉಳಿದವು ಆಗ್ಯೊಳೊ. ಜಾತ್ಯಾತೀತ ಮನೋಧರ್ಮವು ಆಗಿ ಸಾಮಾಜಿಕ ಸೇವಕರ್ತರ್. ತಮ್ಮ ಹೆಸರ್ನ ಅನುವರ್ತಿಸಿದ ಧರ್ಮಾತ್ಮರ್. ಇವೇ ಹೇಳಿಕಂಬಂಗೆ ಇವ್ಕೆ ಪೊಳಲಿ ಶೀನಪ್ಪ ಹೆಗ್ಗಡೆಂತೇಳೊವು ಇತಿಹಾಸ ವಿಷಯಲಿ ಆಸಕ್ತಿ ಹುಟ್ಟಿಸಿದವು. ಎಲೆಮರೆನ ಕಾಯಿನಂಗೆ ತಮ್ಮ ಬದ್ಕ್‌ನ ರೂಪಿಸಿಕೊಂಡ ಡಿ.ಜಿ. ನಡ್ಕನವು ಹಿರಿ ತಲೆಮಾರಿನ ಮೌಲ್ಯದ ಪ್ರತಿರೂಪದಂಗೆ ಕಂಡವೆ.

ಡಿ.ಜಿ. ನಡ್ಕನವು 25.04.1932ರಲ್ಲಿ ಇಂದ್‌ನ ಕಲ್ಮಡ್ಕ ಗ್ರಾಮದ ನಡ್ಕ ಶಿವಣ್ಣ ಗೌಡ – ಪಾರ್ವತಿ (ಪಾಚು) ದಂಪತಿಗಳ ಮಂಜನಾಗಿ ಜನಿಸಿದೊ. ಕಿರಿಯ 22ರ ವಯಸ್‌ಲಿ ಶ್ರೀಮತಿ ಜಾನಕಿಯವರ ಮೊದುವೆ ಆದೊ. ಇವು ಮೊದುವೆ ಆದ ದಿನ ಮತ್ತು ಹುಟ್ಟಿದ ದಿನ ಒಂದೇ ಆಗಿರ್ದು ವಿಶೇಷವಾಗಿಟು. 24.10.1951ರಲ್ಲಿ ಶಾಲಾ ಅಧ್ಯಾಪನ ವೃತ್ತಿಗೆ ಸೇರಿ 30.04.1991ರಲ್ಲಿ ನಿವೃತ್ತಿ ಆದೊ. ಇವು ಸಲ್ಲಿಸಿದ ಸೇವೆನ ಗಮನಿಸಿರೆ ಇವು ಹೊಟ್ಟೆ ಪಾಡಿಗಾಗಿ ಮಾಸ್ತರ್‌ಗಿರಿ ಮಾಡ್ದವು ಆಗಿರದೆ ವೃತ್ತಿ ಗೌರವಕ್ಕಾಗಿ ಸವೆಸಿದ ಜೀವಂತೇಳಿ ಗೊತ್ತಾದೆ. ಡಿ.ಜಿ. ನಡ್ಕನವು ವೃತ್ತಿ ಜೀವನಲಿ ಶಾಲಾ ಮಕ್ಕಳ್ಗೆ ಪಠ್ಯೇತರ ಚಟುವಟಿಕೆಲಿ ಆಸಕ್ತಿ ಹುಟ್ಟುವ ಸಲುವಾಗಿ ಸ್ವರಚಿತ ನಾಟಕಗಳಲಿ ಪಾತ್ರ ಮಾಡ್ವಂಗೆ ಮಾಡುತ್ತಿದ್ದೊ. ಬೇರೆ ಶಾಲೆಗಳಿಗೂ ಹೋಗಿ ಹೇಳಿ ಕೊಡುತ್ತಿದ್ದೊ. ತಮ್ಮ ಯೌವನ ದಿನಗಳ್ಲಿ ಇವು ಉತ್ಸಾಹದ ಚಿಲುಮೆನೆ ಆಗಿದ್ದೊ.

ಇವ್‌ಕೆ ಸಾಹಿತ್ಯಲಿ, ಬರವಣಿಗೆಲಿ ಆಸಕ್ತಿ ಹುಟ್ಟುವಂಗೆ ಮಾಡಿದವು ಹಿರಿಯ ಸಾಹಿತಿ ಪಂಜದ ಟಿ.ಜಿ ಮುಡೂರುನವು. ಇವರ ಪ್ರಭಾವಕ್ಕೆ ಒಳಗಾದ ಡಿ.ಜಿ. ನಡ್ಕನವು ತಮ್ಮ ವೃತ್ತಿ ಜೀವನಲಿ 20ಕ್ಕಿಂತ ಜಾಸ್ತಿ ಮಕ್ಕಳ ನಾಟಕನ ರಚನೆ ಮಾಡ್ಯೊಲೊ. ಇವು ಬರ್ದ ನಾಟಕಗ ತುಳು ಹಾಂಗೆ ಕನ್ನಡಲಿ ಒಳೊ. ಇದರಲಿ ಕೆಲವು ಮಾತ್ರ ಪ್ರಕಟ ಆಗ್ಯೊಲೊ. ಆದರೂ ಸ ಇವರ ನಾಟಕಗ ಎಲ್ಲನೂ ಸುಳ್ಯ, ಪುತ್ತೂರು ಪರಿಸರ ಶಾಲಾ ಮಕ್ಕಳ್‌ಂದ ಯುವಕರ್‌ಂದ ಪ್ರದರ್ಶನ ಆಗೊಳೊ. ಇವರ ಮಕ್ಕಳ ನಾಟಕಗಲ್ಲಿ 'ಚಂದ್ರಹಾಸ', 'ಮಕ್ಕಳೇ ದೇವರು', 'ಶಾಕುಂತಲಾ', 'ಜೈಕಿಸಾನ್' ನಾಟಕಗ ಪ್ರಕಟ ಆಗೊಳೊ. ಇದರ್‌ಲ್ಲಿ 'ಶಾಕುಂತಲಾ' ನಾಟಕ ಗೀತ ರೂಪಕ ಆಗುಟು. ಈ ನಾಟಕ ಕಾಸರಗೋಡು ಜಿಲ್ಲೆಲಿ ಪ್ರದರ್ಶನ ಆಗಿ ಜನಪ್ರಿಯ ಆದ್ದ್ ವಿಶೇಷ.

'ಮಕ್ಕಳೇ ದೇವರು' ನಾಟಕನ ಶ್ರೀ ಕೇಶವ ಎಂಬವು ಮರಾಟಿ/ ಹಿಂದಿಗೂ ಅನುವಾದ ಮಾಡಿ ಪ್ರದರ್ಶಿಸಿ ಪ್ರಶಸ್ತಿನೂ ಪಡ್ದೊಲೊ. 1837ರ ಕಾಲ ಘಟ್ಟಲಿ ಸುಳ್ಯ – ಕೊಡಗಿನವು ಬ್ರಿಟಿಷರ ವಿರುದ್ಧ ಸಂಘಟಿಸಿದ ಸ್ವಾತಂತ್ರ್ಯ ಹೋರಾಟನ ಕೇಂದ್ರಿಕರ್‌ಸಿದ 'ಕಲ್ಯಾಣಪ್ಪನ ಆಸೆ' (ತುಳುನಾಟಕ 1986) ಮಂಗಳೂರ್‌ನ ತುಳು ಕೂಟದವು ನಡ್ಸಿದ ನಾಟಕ ಸ್ಪರ್ಧೆಲಿ ದ್ವಿತೀಯ ಸ್ಥಾನ ಗಳ್ಸಿಟು. ಈ ನಾಟಕ ಮುಂದೆ 'ಕಲ್ಯಾಣಪ್ಪನ ಸ್ವಾತಂತ್ರ್ಯ ಸಮರ'ಂತೇಳಿ ಕನ್ನಡ ಭಾಷೆಲು ಬಂದುಟು. ಇನ್ನೊಂದು ತುಳು ಸಾಮಾಜಿಕ ನಾಟಕ 'ನೇತ್ರಾವತಿ'(1985). ರತ್ನವರ್ಮ ಹೆಗ್ಡೆ ಸ್ಮಾರಕ ಪ್ರಶಸ್ತಿನೂ ಪಡ್ದುಟು

ಇವರ ನಾಟಕಗಲ್ಲಿ ಕಳೆದ ಶತಮಾನದ 70–80ರ ದಶಕದ ಸಮಕಾಲೀನ ಸೈದ್ಧಾಂತಿಕ ನೆಲೆಗಟ್ಟ್‌ಗ ಹಾಸು ಹೊಕ್ಕುಟು. ಇವು ಬರ್ದ 'ಗಾಂಧಿವಾದಿ ಚೆನ್ನಯ್ಯ', 'ಪೊಸ ಸಮಾಜ' – ಈ ತುಳು ನಾಟಕಗಲ್ಲಿ ಇದ್ ಖಚಿತವಾಗಿ ಗೋಚರಿಸುತ್ತುಟ್ಟು. 'ಪೊಸ ಸಮಾಜ' ನಾಟಕ ಪುತ್ತೂರು ತುಳು ಕೂಟದವು ನಡ್ಸಿದ ಸ್ಪರ್ಧೆಲಿ ಬಹುಮಾನ ಪಡ್ದುಟು. ಈ ನಾಟಕಗಲ್ಲಿ ಸಮಾಜ ಸುಧಾರಕ ನೆಲೆಲಿ ಗಾಂಧೀಜಿಯ ಪ್ರಭಾವಗ ಎದ್ದು ಕಂಡವೆ. ಡಿ.ಜಿ ನಡ್ಕನವು ಅವೇ ಹೇಳಿಕಂಬಂಗೆ ಅವ್‌ಕೆ ಇಂದಿರಾ ಗಾಂಧಿನ 20 ಅಂಶ ಕಾರ್ಯಕ್ರಮ ಮೆಚ್ಚಿಗೆ ಆವುಟು. "ಉಳುವವನೇ ಹೊಲದೊಡೆಯ' ತತ್ವನ ಕರ್ನಾಟಕಲಿ ಅನುಷ್ಠಾನಗೊಳ್ಸಿದ ಮುಖ್ಯಮಂತ್ರಿ ದಿ. ದೇವರಾಜ ಅರಸುನ ಆಡಳಿತನ ಅವು ಮೆಚ್ಚಿಕೊಂಡೊಳೊ. 'ಜೈಜವಾನ್ ಜೈಕಿಸಾನ್' ನಾಟಕ ಲಾಲ್ ಬಹುದ್ದೂರು ಶಾಸ್ತ್ರೀನ ತತ್ವ ಪ್ರಭಾವಂದ ರಚನೆಯಾದ ಅಪ್ರಕಟಿತ ನಾಟಕ ಆಗುಟು. ಉಡುಪಿನ ಮನೋರಮ ಮಧ್ವರಾಜ್ ಎಲೆಕ್ಷನ್‌ಗೆ ನಿಂತಿರಾಕನ ಓಟು ಕೇಳಿಕೆ ಪ್ರಚಾರ ಸಾಮಾಗ್ರಿಗೆ ಪದ್ಯಗ ರಚನೆ ಮಾಡಿ ಕೊಟ್ಟದ್ದ್ ಹಾಂಗೆ ಅದರ ಒಂದು ಸಾವಿರ ಪ್ರತಿಗ ಪ್ರಿಂಟ್ ಆದ್ ಡಿ.ಜಿ. ನಡ್ಕರ ಜೀವಿತದ ಐತಿಹಾಸಿಕ ಸಂಗತಿ.

ಈಗ ಡಿ.ಜಿ. ನಡ್ಕನವು 86ರ ವಯಸ್ಸಿನ ಹಿರಿಯವು. ಅವುಕ್ಕೆ ಮಾತಾಡ್ದು ಕಷ್ಟ ನಿಜ. ಆದೊರು ಅವು ಬಾಯಿ ಬುಟ್ಟರೆ ತುಳುನಾಡ್ನ ಆಳ್ದ ಐತಿಹಾಸಿಕ ಬಲ್ಲಾಳ, ಅವರ ಬೀಡುಗ ನಮ್ಮ ಎದ್ರ್ ಪ್ರತ್ಯಕ್ಷ ಆಗುವಂತೆ ಬುಡ್ಸಿಸಿ ಹೇಳ್ವೆ. ಚರಿತ್ರೆನೆ ಇಲ್ಲಾಂತ ಹೇಳ್ವ ಸುಳ್ಯ, ಪಂಜ, ಎಣ್ಮೂರು, ಸುಬ್ರಹ್ಮಣ್ಯ ಜಾಗೆನ ಮೌಖಿಕ ಕಥನಗಲ್ಲಿ ನಮ್ಮ ದರ್ಶನ ಮಾಡ್ಸಿ ಬುಡುವ ಶಕ್ತಿ ಡಿ.ಜಿ. ನಡ್ಕನವ್ಕೆ ಉಟ್ಟು. ಅಧ್ಯಾಪನ ವೃತ್ತಿಲಿ ಇರಿಕಾನ ಇವ್ಕೆ ಚರಿತ್ರೆನ ಪುನರ್ ರಚಿಸುವ ಅವಕಾಶ ಆತ್ಲೆ. ನಿವೃತ್ತಿ ಆದ ಮೇಲೆ ಇವು ಕತೆ, ಕವನಗ ರಚನೆ ಮಾಡ್ಯೊಲೊ. ಆದರೆ ಅವು ಸಂಕಲನ ರೂಪಲಿ ಪ್ರಕಟ ಆತ್ಲೆ. ಬೇರೆ

ಬೇರೆ ಸಂದರ್ಭನ ಸ್ಮರಣೆ ಸಂಚಿಕೆಲಿ ಪ್ರಕಟ ಆಗೊಲೊ. ಯಾವ್ದೆ ದೈವ – ದೇವಸ್ಥಾನಗಳ ಹೆಸ್ರ್‌ಲಿ ಹೊರ ಬರುವ ಸಂಚಿಕೆಲಿ ಇವರ ಸ್ಥಳ ಪುರಾಣ, ಮೌಖಿಕ ಐತಿಹ್ಯಗ ಇರೊಕುಂತ್ಲೆ ಎಂಬಂಗೆ ಇವರ್‌ಂದ ಆ ಬಗೆಲಿ ಲೇಖನ ಬರ್ಸಿ ಪ್ರಕಟಿಸುವ ಪದ್ಧತಿನೇ ಸುಳ್ಯ ಪರಿಸರಲ್ಲಿ ಚಾಲ್ತಿಲಿ ಉಟ್ಟು. ಇದ್ ಮೌಖಿಕ ಇತಿಹಾಸಲಿ ಇವ್ಕೆ ಇರುವ ಪ್ರೌಡಿಮೆನ ರುಜು ಮಾಡ್ದೆ. ಸುಳ್ಯ ತಾಲೂಕಿನ ಸುಳ್ಯ, ಬೆಳ್ಳಾರೆ, ಪಂಜ, ಬಳ್ಪ, ಸುಬ್ರಹ್ಮಣ್ಯ ಜಾಗೆಗನ ಐತಿಹಾಸಿಕತೆ, ಸ್ಥಳ ಮಹಾತ್ಮೆ, ಐತಿಹ್ಯಗ ಇವ್ಕೆ ಗೊತ್ತಿಲ್ಲದೆ ಇರಿಕಿಲ್ಲೆ. ಈ ಹಿನ್ನೆಲೆಲಿ ಇವು ಜಾನಪದ ವರ್ಕ್ಶ್ಯ ಆಗಿ ಅನೇಕ ಹಿರಿಯ ತಲೆಮಾರಿನ ಸಂಶೋಧಕರಿಗೆ ಮಾರ್ಗಸೂಚಿ ಆಗ್ಯೊಲೊ. ಡಾ. ವಾಮನ ನಂದವರ ಅವು ಸಂಶೋಧಿಸಿದ ಕೋಟಿ–ಚೆನ್ನಯ ಮಹಾಪ್ರಬಂಧದ ಪ್ರತಿ ಪುಟಲೂ ಡಿ.ಜಿ. ನಡ್ಕನ ಮುಖ ಪ್ರತಿಫಲ್ಸಿದೆ.

ಡಿ.ಜಿ. ನಡ್ಕನವ್ಕೆ ಸದಾ ಕಾಡ್ದ ಎರ್ಡ್ ಐತಿಹಾಸಿಕ ಸಂಗತಿ ಎಂದರೆ ಆರಾಧನಾ ಜಗತ್ತ್‌ನ ಅರಸು ದೈವಗ 'ಉಲ್ಲಾಕುಳು' ಹಾಂಗೆ ಐತಿಹಾಸಿಕ ವ್ಯಕ್ತಿ ಮೂಲದ ಕೋಟಿ – ಚೆನ್ನಯ. ಈ ಎರ್ಡ್ ಪುರಾಣ –ಇತಿಹಾಸದ ವಸ್ತು ಸಂಗತಿನ ಆದರ್ಸಿ ಇವು ಸಂಶೋಧಿಸಿದ 'ಅರಸು ದೈವಗಳು ಮತ್ತು ಇಕ್ಕೇರಿ ಅರಸರು' ಹಾಂಗೆ 'ಕೋಟಿ – ಚೆನ್ನಯ' ಕೃತಿಗನ ಪ್ರಕಟಿಸಿದೊ. ಅರಸು ದೈವಗ ಕೃತಿನ ಓದಿ ವಾಮನ ನಂದಾವರ ಅವು "ಈ ಕೃತಿ ಮುಂದಿನ ಸಂಶೋಧಕರಿಗೆ ಬಹಳಷ್ಟು ಮಾಹಿತಿಗಳನ್ನು ಒದಗಿಸಿಕೊಡುವುದರ ಜೊತೆಗೆ ಹೊಸ ಅಧ್ಯಯನ ವಿಷಯಗಳ ಕಡೆಗೆ ಬೆರಳು ತೋರಿಸುತ್ತದೆ. ದೈವರಾಧನೆಯ ಉಗಮ, ವ್ಯಾಪ್ತಿ, ಪ್ರಾಚೀನತೆಯ ಬಗೆಗೆ ಈಗಾಗಲೇ ಅನೇಕ ವಿದ್ವಾಂಸರು ಅಧ್ಯಯನ ನಡೆಸಿ ಈ ಕುರಿತು ಪೌರಾಣಿಕ ಹಾಗು ಚಾರಿತ್ರಿಕತೆಯ ಬಗೆಗೆ ಹೆಚ್ಚಿನ ಶೋಧಕಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಡಿ.ಜಿ. ನಡ್ಕರವರು ಈ ತಲೆಮಾರಿಗೊಂದು ಮಹತ್ವದ ಕೃತಿಯನ್ನು ನೀಡಿರುತ್ತಾರೆ" ಎಂದು ಅಭಿಪ್ರಾಯ ಕೊಟ್ಟ್ ಡಿ.ಜಿ. ನಡ್ಕರ ಮಹತ್ವನ ತಿಳ್‌ಸ್ಯೊಲೊ. ಡಾ. ವಾಮನ ನಂದಾವರನವು ಹೇಳ್ದಂಗೆ ಮುಂದೆ ಈ ಅರಸು ದೈವಗಳ ಬಗ್ಗೆ ಸಂಶೋಧನೆ ನಡ್ಸಿಕೆ ಡಾ. ಪೂವಪ್ಪ ಕಣಿಯೂರು ಅವ್ಕೆ ಡಿ.ಜಿ. ನಡ್ಕನವು ಕಾರಣ ಆದೊ; ಒತ್ತಾಸೆ ಆದೊ. ತನ್ನಂದ ಆಗದ ಕೆಲ್ಸನ ಯೋಗ್ಯರಿಂದ ಮಾಡ್ಸುವ ದೊಡ್ಡ ಗುಣ ನಡ್ಕರಲ್ಲಿ ಉಟ್ಟು.

ಡಿ.ಜಿ. ನಡ್ಕನವು ಪ್ರೀತಿಂದ ಅಷ್ಟೇ ಹಠಂದ ಬರೆಕುಂತ್ಲೇ ಬರ್ದ ಕೃತಿ ಕೋಟಿ ಚೆನ್ನಯ ಆಗುಟು. ಅಕ್ಷರ ಪರಂಪರೆನ ಇತಿಹಾಸ ಕೃತಿಗಲ್ಲಿ ದಾಖಲಾಗದ ಇತಿಹಾಸದ ಅನೇಕ ನೈಜ ಸಂಗತಿಗ ಅವರ ಸದಾ ಕಾಡ್ದ್ ನಿಜ. ಮಧ್ಯಕಾಲೀನ ಅದರ್ಲೂ ಕೆಳದಿ ಅರಸರ ಕಾಲದ ತುಳುನಾಡ್ನ ಇತಿಹಾಸದ ಬಗ್ಗೆ ಡಿ.ಜಿ. ನಡ್ಕನವ್‌ಕೆ ಅಪಾರ ಒಲವು. ಈ ಕಾಲ ಘಟ್ಟದ ಇತಿಹಾಸ ಅಧ್ಯಯನ, ಜಾನಪದ ಮೌಖಿಕತೆಯ ಅನುಭವ, ಕ್ಷೇತ್ರಾಧ್ಯಯನದ ಸಾರ, ಪಾಡ್ದನ ಸಾಹಿತ್ಯದ ಪರಿಚಯ, ಪಾಡ್ದನಲಿ ದಾಖಲಾಗುವ ಪಂಜ ಪರಿಸರದ ಸ್ಥಳ ನಾಮಗಳಲ್ಲಿ ಕೋಟಿ ಚೆನ್ನಯ ದಾಖಲಾಗುವ ಬಗೆನ ದಾಖಲ್ಸಿ ಈ ಕೃತಿನ ನಡ್ದ ಸಂಗತಿನ ನೈಜ ಎಂಬಂತೆ ರಚಿಸ್ಯೊಲೊ. ಒಂದು ಹಂತಲಿ ಸಂಶೋಧಕರ್‌ಗೆ ವಸ್ತು ಸಂಗತಿನ ನಿರೂಪಿಸುವ ವರ್ಕ್ಶ್ಯ ನೆಲೆಲಿ ನಿಲ್ಲುವಂತಾಗಿದ್ದ ಡಿ.ಜಿ. ನಡ್ಕನವು ಈ ಕೃತಿ ರಚನೆ ಮೂಲಕ ಸ್ವತಃ ಸಂಶೋಧಕನಾಗುವಂತಾತ್.

ನನ್ನ ಪ್ರಗತಿಲಿ ಅಪ್ಪ ಅಮ್ಮನ ಕೊಡುಗೆ ಅಪಾರ ಉಟ್ಟೆಂತ ನಡ್ಕನವು ಹೇಳ್ವೆ,

ನಾ ನೀವು ಕರೆವಂಗೆ ಜಾನಪದ ವಿದ್ವಾಂಸ ಹೌದೋ ಅಲ್ಲನೋ ನಂಗೆ ಗೊತ್ತಿಲೆ. ನನ್ನ ಅಮ್ಮ ದೊಡ್ಡ ಜಾನಪದ ಕತೆಗಾರ್ತಿ ಆಗಿದ್ದೊ. ನೇಜಿ ಗದ್ದೆಗೆ ಇಳ್ದರೆ ಕಬಿತೆಗ ಅವರ್‌ಂದ ಒಂದರ್‌ಂದ ಇನ್ನೊಂದ್ ಎಂಬತೆ ಬರ್‌ತಿದ್ದೊ. ನಾ ಪುಣಿಲಿ ಕುದ್ದು ಕೇಳ್ತಿದ್ದೆ. ಅವು ಕೋಟಿ ಚೆನ್ನಯ ಸಂಧಿ ಹಾಡ್ತಿದ್ದೊ, ನಾ ಕೆಬಿಕೊಟ್ಟ್ ಕೇಳ್ತಿದ್ದೆ. ಅದ್ ನನ್ನ ಕೆಬಿಲಿ ಹಾಂಗೆನೆ ನಿಂತಿತ್ತ್. ಕೋಟಿ ಚೆನ್ನಯ ಪಾಡ್ದನಲಿ ಗಂಗು ಅಜ್ಜಿ ಬಂದದೆ. ಆ ಅಜ್ಜಿಯೇ ನಂಗೆ ಕಣ್ಣೆದ್ರ್ ನಿತ್ತದೆ. ಹಾಂಗೇ ನನ್ನ ಮಾವ ಅಕ್ರಿಕಟ್ಟೆ ಪುಕ್ರಪ್ಪ ಗೌಡರು ಬಾಯಿಮಾತಿಲಿ ಹೇಳ್‌ತ್ದ್ದ ಕತೆಗ ನಂಗೆ ಪ್ರೇರಣೆ ಆಗುಟು ಅಂತ ಹೇಳಿ ತನ್ನ ಆಸಕ್ತಿ ಮೂಲನ ಅವು ನೆನಪಿಸಿಕಂಡವೆ. ಮನೆನ ಪರಿಸರ ಡಿ.ಜಿ. ನಡ್ಕನವು ಹೀಂಗೆ ಬಹುಶ್ರುತರಾಗುವಲ್ಲಿ ಪ್ರೇರಣೆ ನೀಡಿರ್ದು ನಿಜ.

ನಿಜ ಜೀವನಲಿ ಸಾಮಾಜಿಕ ಸೇವಾಕರ್ತರಾಗಿ ಡಿ.ಜಿ. ನಡ್ಕನವು ಹೆಸರುವಾಸಿ. ಇವು ಮನೆ ಹಕ್ಕಲೆನ ಪಡ್ಪಿನಂಗಡಿಲಿ ಹೆತ್ತವರ ಹೆಸ್ರ್‌ಲಿ ಶಿವಗೌರಿ ಕಲಾಮಂದಿರನ ನಿರ್ಮಿಸಿ, ಜಾತ್ಯಾತೀತ ನೆಲೆಲಿ ಎಲ್ಲಾ ಬಡವರಿಗೆ ಉಚಿತವಾಗಿ ಮದುವೆ ಜಂಬರ ನಡೆಸಿಕ್ಕೆ ಕೊಟ್ಟವೆ. ಇದರಲಿ ಸರ್ಕಾರದ ಹಾಂಗೆನ ಇತರ ಸಂಘ ಸಂಸ್ಥೆಗ ಜಂಬರನ ಉದಾರವಾಗಿ ನಡ್ಸುವೆ. ಇದು ಡಿ.ಜಿ ನಡ್ಕರ ಉದಾರತೆಗೆ ಸಾಕ್ಷಿ. ಡಿ.ಜಿ. ನಡ್ಕನವು ದಾನ ಮಾಡ್ವಲಿ ಎತ್ತಿದ ಕೈ. ಇವು ತಾನು ಸೇವೆ ಸಲ್ಲಿಸಿದ ಪಡ್ಪಿನಂಗಡಿ, ಎಡಮಂಗಲ, ಎಣ್ಮೂರು, ಇಂದ್ರಾಜೆ, ಪಂಜ ಈ ಸರ್ಕಾರಿ ಶಾಲೆಗಳ್ಲಿ ಅಪ್ಪ ಅಮ್ಮನ ಹೆಸ್ರ್‌ಲಿ ರೂ ಐವತ್ತ್ ಸಾವ್ರನ ದತ್ತಿನಿಧಿಯಾಗಿಟ್ಟು ಬಡ ವಿದ್ಯಾರ್ಥಿಗಳಿಗೆ ಧನ ಸಹಾಯ ಮಾಡ್ತೊಳೊ. ಸಾಮಾನ್ಯವಾಗಿ ಮನೆ ಕೆಲಸಕ್ಕೆ ಬರುವ ಜನನ ಕೂಲಿ ಜನಾಂತ ಭಾವಿಸುವವೇ ಜಾಸ್ತಿ. ಹಿಂಗಿರ್ಕನ ನಡ್ಕನವು ಮಾತ್ರ ಅವು ಮನೆನ ಸದಸ್ಯರೇ ಎಂಬ ಭಾವನೆಲಿ ನೋಡ್ಯೊಳೊ. ಅವರ ಮಕ್ಕಳ ಶಿಕ್ಷಣಕ್ಕೆ ಧನ ಸಹಾಯ ಹಾಂಗೆ ವಯಸ್ಸಿಗೆ ಬಂದ ಮಕ್ಕಗಳಿಗೆ ಮದುವೆ ಮಾಡ್ಸುವ ದುಡ್ಡು ಒದಗಿಸಿಕೊಡುವ ಕಾರ್ಯನ ಪ್ರೀತಿಲಿ ಮಾಡ್ಯೊಳೊ.

ಡಿ.ಜಿ. ನಡ್ಕನವುಕ್ಕೆ ಅವು ಸಲ್ಸಿದ ಉದಾರ ಸೇವೆಗೆ ನಮ್ರ ಸ್ಥಾನಮಾನ ಸಂದುಟು. ಸುಳ್ಯ ತಾಲೂಕು ಸಾಹಿತ್ಯ ಸಮ್ಮೇಳನಲಿ ಸನ್ಮಾನ, ಜಿಲ್ಲಾ ಮಟ್ಟದ ಚುಟುಕು ಸಾಹಿತ್ಯ ಸಮ್ಮೆಳನ ಸನ್ಮಾನ, ಕೋಟಿ ಚೆನ್ನಯ ಮಾಹಿತಿ ಕಥನಕ್ಕೆ ಸನ್ಮಾನ, ಸುಳ್ಯ ತಾಲೂಕು ಸಾಹಿತ್ಯ ಸಮ್ಮೇಳನಲಿ ಕವಿಗೋಷ್ಠಿ ಅಧ್ಯಕ್ಷತೆ, ಪಂಜ ಹೋಬಳಿ ಮಟ್ಟದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಜಿಲ್ಲಾ ಮಟ್ಟದ ರಾಜ್ಯೋತ್ಸವ ಪ್ರಶಸ್ತಿ ಸನ್ಮಾನ್ಯ ಡಿ.ಜಿ. ನಡ್ಕನವುಕ್ಕೆ ಸಂದಾಯ ಆಗುಟು.

ನಮ್ಮ ಕಾಲಲಿ ಈ ಹೊತ್ತಿನಂಗೆ ಅರೆಭಾಷೆಗೆ ಮಾನ್ಯತೆ ಇರ್ತಿದ್ದರೆ ನಾ ಅದರಲಿ ಬರೆಯುತ್ತಿದ್ದೆ. ಆ ಕಾಲಲಿ ನಾ ಬರ್ದಿದ್ದರೆ ನನ್ನ ಯಾರ್ ಗುರ್ತಿಸಿಸುದ್ದೊ? ಯಾರು ಅರೆಭಾಷೆನ ಓದುವೆ? ಹಾಂಗಾಗಿ ನಾ ಅದರ ಗೋಡವೆಗೆ ಹೋತ್ಲೆ. ಬರ್ದಿದ್ದರೆ ಭಾಷೆ ಬೆಳೆತಿತ್ತೇನೋ? ಹೀಂಗೆ ಪ್ರಶ್ನಿಸಿ ಸುಮ್ಮನಾದವೆ. ಈಗ ಬರೆಯೊಮ ಅಂದರೆ ವಯಸ್ಸಾತ್; ಬರೆಯಕ್ಕೆ ನನ್ನಂದ ಸಾಧ್ಯ ಇಲ್ಲೆ. ಕೈ ನಡ್ಗಿದೆಂತೇಳ್ವ ಮರುಕ ಅವುಕ್ಕೆ ಉಟ್ಟು. ಹಿರಿಜೀವ ಡಿ.ಜಿ. ನಡ್ಕ ಧರ್ಮಪಾಲ ಅನ್ನುವ ತಮ್ಮ ಹೆಸರಿನಂಗೆ ಧರ್ಮಾತ್ಮರ್. ಬರಹಗಾರರ ಕಂಡರೆ ಅವ್ಕೆ ಅಪಾರ ಅಕ್ಕರೆ, ಪುಸ್ತಕ ಕೇಳಿ ತಕಂಬ ಮೋಹ; ಹೊಸ್ತರ ಅವರ್‌ಂದ ಬರ್ಸುವ ಉತ್ಸಾಹ ಇರುವ ಡಿ.ಜಿ. ನಡ್ಕ ನಮ್ಮ ಕಾಲದ ಅಪರೂಪದ ವ್ಯಕ್ತಿ.

ಕೃತಿ ಪರಿಚಯ

# ಅರೆಭಾಸೆಲಿ ಮಾನಸ ಮಹಾಭಾರತ

– ಕುತ್ಯಾಳ ನಾಗಪ್ಪ ಗೌಡ(ಕಿರಣಿ)

ವ್ಯಾಸ ಮಹರ್ಷಿ ಗಣೇಶನ ಕೈಲಿ ಬರ್ಸಿದ 'ಜಯ' ಹೆಸರ್‌ನ ಮಹಾಕಾವ್ಯ ಮುಂದೆ ಮಹಾಭಾರತ ಆತ್. ಭಾರತ ಅಲ್ಲದೆ ಪ್ರಪಂಚದ ಬೇರೆ ಬೇರೆ ದೇಶಗಲ್ಲಿ ಜನ ಮೆಚ್ಚಿಗೆ ಪಡ್ದ ಮಹಾ ಕಾವ್ಯ ಮಹಾಭಾರತ. ಕೆಲ ವರ್ಷಗಳ ಹಿಂದೆ ಪೀಟರ್ ಬ್ರೂಕ್ (ಪ್ರಸಿದ್ಧ ರಂಗ ನಿರ್ದೇಶಕ) ಫ್ರೆಂಚ್ ಹಾಂಗೂ ಇಂಗ್ಲೀಷ್ ಭಾಷೆಲಿ ಮಹಾಭಾರತನ ನಾಟಕ ಮಾಡಿ ಜಗತ್ತಿಗೆ ತೋರ್ಸಿಟು. ಸುಮಾರ್ 9 ವರ್ಷಗಳ ಈ ನಾಟಕದ ನಟವರ್ಗ ಪ್ರಪಂಚದ ಬೇರೆ ಬೇರೆ ದೇಶಗಳಿಗೆ ಸೇರ್‌ದವು. ಕನ್ನಡಲಿ ಗದುಗಿನ ಭಾರತ, ಗದಾಯುದ್ಧ, ಪಂಪಭಾರತ., ಜೈಮಿನಿ ಭಾರತ, ಹೀಂಗೆ ಕಾಲಕಾಲಕ್ಕೆ ಕೃತಿ ರಚನೆ ಆಗುಟು. ಕನ್ನಡದ ಸುಪ್ರಸಿದ್ಧ ವಿದ್ವಾಂಸ ಪ್ರೊ.ಕೋಡಿ ಕುಶಾಲಪ್ಪ ಗೌಡ್ರು ಈಗ ಅರೆಭಾಸೆಲಿ ಮಹಾಭಾರತ ಬರ್ದೊಳು. ಅದೇ ಮಾನಸ ಭಾರತ.

ನಾವ್ ಓದಿದ ಕೇಳ್ದ ಸಂಗತಿ ಕೆಲವು ಸಮಯ ಕಳ್ದ ಮೇಲೆ ಮರ್ತ್ ಹೋದ್ದೆ. ಮಹಾಭಾರತದ ಕತೆ ಹಾಂಗಲ್ಲ. ಆಗಾಗ ನೆಂಪಾದೆ. ಯಾಕಂದ್ರೆ ನಮ್ಮ ಕತೆ ಕೂಡಾ ಅದರ್ಲಿ ಉಟ್ಟು. ಆಸ್ತಿ ಪಾಲಾದ ಕತೆ, ಜೂಜಾಡಿ ಆಸ್ತಿ ಮನೆ ಕಳ್ಕೊಂಡ ಕತೆ, ಮದುವೆ ಆಗದ ಗೂಡೆ ಕೂಸಿಗೆ ಜನ್ಮ ಕೊಟ್ಟ ಕತೆ, ದೊಡ್ಡಪ್ಪ ನಗ್‌ನಗ್ತಾ ತಮ್ಮನ ಮಕ್ಕಳ ಸೋಲಿಸಿದ ಕತೆ, ನಂಟ್ರ್ ಅಣ್ಣ ತಮ್ಮಂದಿರ ಪಕ್ಷ ಸೇರಿ ನಾಶವಾದ ಕತೆ ದೈವ ಕೃಪೆಯ ಕತೆ– ಹೀಂಗೆ ನಮ್ಮೆಲ್ಲರ ಕತೆ ಒಂದಲ್ಲ ಒಂದು ರೀತಿ ಇದರೊಳಗೆ ಉಟ್ಟು. ಕಷ್ಟ ಬಾಕನ 'ಕುಂತಿ ಮಕ್ಕಳಿಗೆ ವನವಾಸವೇ ಗತಿ' ಅಂತ ಜನ ಹೇಳ್ವೆ ಜನಗಳ ಯೋಚನೆ ಕೂಡಾ ಮಹಾಭಾರತದ ಒಳಗಿಂದ ಬಂದದೆ.

ಮಹಾಭಾರತದ ಕತೆನ ಸೂತಪುರಾಣಿಕರ್ ಶೌನಕಾದಿ ಋಷಿಗಳಿಗೆ ಹೇಳ್ದೊ. ಇದರ ಕೇಳ್ಸಿಕೊಂಡ ವೈಶಂಪಾಯನ ಜನಮೇಜಯಂಗೆ ಹೇಳ್ತ್‌ಗಡ ಹಳೆಗನ್ನಡದ 'ಗಡ' ಅರೆಭಾಸೆಲಿ ಉಟ್ಟು

ಮಹಾಭಾರತದ ಕತೆನ ಹೇಳಿಕೆ 'ಗಡ' ಸರಿಯಾದ ಶಬ್ದ. ಕಿವಿಯಿಂದ ಕಿವಿಗೆ ದಾಟಿಬಂದ ಕತೆ ಮಹಾಭಾರತ. ಅದರ 'ಗಡ ಕಾವ್ಯ' ಅಂತ ಹೇಳಿರೂ ತಪ್ಪಾಕಿಲ್ಲೆ. ಕೇಳ್ಸಿಕೊಂಡವ ಹೀಂಗಾತ್ ಗಡ ಅಂತ ಮತ್ತೊಬ್ಬಂಗೆ ಹೇಳ್ತ್. ಅರೆಭಾಷೆ ಕೃಷಿಕರ ಮನೆಮಾತ್ ಕೃಷಿಕ ಕೃಷಿಭೂಮಿನ ನಂಬಿ ಬದುಕೊಂವ. ಮೊದುವೆ ಆಗಿ ಮಕ್ಕ ಆದ್ಮೇಲೆ ಅವಂಗೆ ಸೊಂತದ ಆಲೋಚನೆ ಬಂದದೆ. ಜಮೀನಿಲಿ ಪಾಲ್ ಕೇಳ್ದೆ. ತಕ್ರಾರ್ ಸುರ್ವಾದ್ದೆ. ಒಂದು ಮನೆ ಎರಡಾಕೆ ಹಿರಿಯೊವು ಒಪ್ಪುದಿಲ್ಲೆ. ಕೇಸ್ ಪಂಚಾತಿಗೆಗೆ ಬಿದ್ದದೆ. ತೀರ್ಮಾನ ಒಪ್ಪಿಗೆ ಆಗದೇ ಹೋದ್ರೆ ಕೋರ್ಟ್‌ನ ಕಟ್ಟೆ ಹತ್ತುವೆ; ಅಲ್ಲೂ ಸರಿಯಾಗ್ದೇ ಹೋದ್ರೆ ಕುರುಕ್ಷೇತ್ರ ಆದೆ. ಕೃಷಿಕಂಗೆ ಮಹಾಭಾರತ ಮತ್ತೆ ಮತ್ತೆ ನೆಂಪಿಗೆ ಬಾದು ಇದೇ ಕಾರಣಕ್ಕೆ. ಹೊಟ್ಟೆಕಿಚ್ಚ್, ಅವಮಾನ, ಶಪಥ, ಪ್ರತೀಕಾರ, ಅಹಂಕಾರಗಳ ಪ್ರೇರಣೆ ಪಡ್ಕಂಡ್ ಪಾಲಿಗಾಗಿ ನಡ್ಡ ಹೋರಾಟಲಿ ಹದಿನೆಂಟನೇ ದಿನ ಪಾಂಡವು ಗೆದ್ದೊ. ಆದ್ರೆ ಗೆದ್ದ ದಿನವೇ ಪಾಂಡವರ ಸೋಲಿನ ದಿನವೂ ಆಗಿತ್ತ್!. ಅಶ್ವತ್ಥಾಮ ಪಾಂಡವರ ಮಕ್ಕಳ ಕೊಚ್ಚಿ ಹಾಕಿ ಭಾರೀ ಸಂಕಟ ತಂದ್ ಹಾಕಿತ್ತ್. ಗೆಲುವಿನ ಜತೆ ಜತೆಲಿ ಹೆಜ್ಜೆ ಹಾಕುವ ಸೋಲು ಕೂಡಾ ಮಾನಸಭಾರತಲಿ ಕಾಣ್ಸಿಕೊಂಡದೆ. ಪಾಂಡವರ ಸಣ್ಣ ಸೈನ್ಯ ದೈವ ಸಹಾಯದಿಂದ ಯುದ್ಧಲಿ ಗೆದ್ದರೂ ಕಳ್ಕೊಂಡದ್ದೇ ಜಾಸ್ತಿ. ನೆತ್ತರ್ ಹರಿಯುದರ ತಡಿಯಕೆ ದೇವರಿಂದ ಕೂಡಾ ಸಾಧ್ಯ ಆತ್ಲೆ.

ಮಾನಸ ಭಾರತದ ಅರ್ಜುನ ತೀರ್ಥಯಾತ್ರೆ ಸಮಯಲಿ ಕೊಡಗಿಗೂ ಬಂದುಟು. ಕೊಡಗಿನ ಬೆಟ್ಟ, ತೋಟ ನೋಡಿ, ಕಾವೇರಿ ನೀರ್ ಕುಡ್ದ್, ಸುಳ್ಯ ಪುತ್ತೂರು ದಾರಿಲಿ ಬನವಾಸಿಗೆ ಹೋಗುಟು. ದಾರಿಯುದ್ದಕೂ ತುಳು ಕನ್ನಡ ಮಾತ್‌ಗಳ ಕೇಳ್ಸಿಕೊಂಡುಟು. ಇಲ್ಲಿ ಕೋಗಿಲೆಯಾಗಿ ತುಂಬಿಯಾಗಿ ಹುಟ್ಟಿರೂ ಜನ್ಮ ಸಾರ್ಥಕ ಅಂತ ಬನವಾಸಿನ ನೋಡಿ ಹೇಳಿಟು. ಕರ್ಣರಸಾಯನಮಲ್ತೆ ಭಾರತಂ ಅಂತ ಪಂಪ ಕರ್ಣನ ಪರವಾಗಿ ನಿಂತ ಹಾಂಗೆ ಮಾನಸಭಾರತಲಿ ಕೂಡಾ ಕರ್ಣನ ವ್ಯಕ್ತಿತ್ವಕ್ಕೆ ಕಿರೀಟ ತೊಡಿಸುವ ಪ್ರಯತ್ನ ನಡ್ದುಟು. ದುರ್ಯೋಧನ ವೀರನೆ ಆದ್ರೂ ಗಂಧರ್ವರೊಡನೆ ಹೋರಾಡುವಷ್ಟ್ ತಾಕತ್ತಿದ್ದಂವ ಅಲ್ಲ. ಪಾಂಡವರ ಬಡತನ ನೋಡಿ ಸಂತೋಷಪಡಿಕೆ ಕಾಡಿಗೆ ಹೋದ ದುರ್ಯೋಧನನ ಯಕ್ಷನೊಬ್ಬ ಮುದ್ದೆ ಮಾಡಿ ಹಿಡ್ಕೊಂಡ್ ಹೋತ್. ಆಗ ಅರ್ಜುನನೇ ಹೋಗಿ ಯಕ್ಷನ ಸೋಲ್ಸಿ ದುರ್ಯೋಧನನ ಬುಡ್ಸಿಕಂಡ್ ಬಾತ್. ಆಮೇಲೆ ದುರ್ಯೋಧನಂಗೆ ಬೇರೊಂದು ಗಂಡಾಂತರ ಎದ್ರಾತ್. ಗಂಧರ್ವನೊಬ್ಬ ವಶೀಕರಣದ ಬೂದಿಹಾಕಿ ಭಾನುಮತಿನ ಸ್ವಾಧೀನ ಮಾಡಿಕಂಡ್ ದುರ್ಯೋಧನನ ಎದ್ರ್ ಕಾಮಸುಖ ಪಡಿಕೆ ಸುರು ಮಾಡ್ತ್. ಇಂವ ನೋಡತ್ತಿತ್ತ್. ಅಷ್ಟೇ ದುರ್ಯೋಧನ ಕರ್ಣನ ಸಹಾಯ ಕೇಳ್ತ್. ಒಪ್ಪಂದದ ಪ್ರಕಾರ ದುರ್ಯೋಧನ ಮಲಗುವಲ್ಲಿ ಕರ್ಣ ಮಲಗಿತ್. ಯಥಾ ಪ್ರಕಾರ ಗಂಧರ್ವ ಬಾತ್. ಕಾದ್‌ಕೊಂಡಿದ್ದ ಕರ್ಣ ತನ್ನ ಆಯುಧದಿಂದ ಗಂಧರ್ವನ ಸೋಲ್ಸಿ ಓಡ್ಸಿತ್ತ್. ಕರ್ಣ ಅಲ್ಲಿಯೇ ಮಲಗಿ ಬೊಳ್ಪಿಗೆದ್ದ್ ಹೋಗಿ ನಡ್ದ ಸಂಗತಿನ ದುರ್ಯೋಧನಂಗೆ ತಿಳ್ಸಿತ್. ದುರ್ಯೋಧನಂಗೆ ಕುಸಿ ಆತ್ ಆದ್ರೆ ಒಂದು ಸಂಶಯ ಮಾತ್ರ ಮನ್ಸಲೇ ಒಳ್ತ್. ಕೆಲವು ಸಮಯ ಕಳ್ದಮೇಲೆ ಕರ್ಣನ ಹೆಣ್ಣ್ ಬಸ್ರಿಯಾದ ಸುದ್ದಿ ಅರಮನೆಗೆ ತಲ್ಪಿತ್. ಭಾನುಮತಿಗೆ

ನಂಬಿಕೆ ಬಾತ್ಲೆ. ಅಂದ್ ಗಂದರ್ವನ ಓಡ್ಸಿದ ಕರ್ಣ ಹಕ್ಕಲೆ ಮಲಗಿದ್ದರೂ ತನ್ನ ಪುರುಷತ್ವ ಪ್ರದರ್ಶನ ಮಾಡ್‌ತ್ಲೆ. ಅಂವ ನಪುಂಸಕ ಅಂತ ಭಾನುಮತಿ ತಿಳ್ಕೊಂಡಿತ್ತ್. ಭಾನುಮತಿ ಈ ವಿಷಯನ ದುರ್ಯೋಧನಂಗೆ ತಿಳ್ಸದೆ. ದುರ್ಯೋಧನಂಗೆ ಕರ್ಣನ ಮೇಲೆ ಗೌರವ ಹೆಚ್ಚಾದ್ದೆ. ಈ ಘಟನೆ ಕರ್ಣನ ವ್ಯಕ್ತಿತ್ವಕ್ಕೆ ವಿಶೇಷ ಮೆರುಗು ಕೊಟ್ಟದೆ. ಅದೇ ಹೊತ್ತಿಗೆ ಛಲದಂಕಮಲ್ಲನ ಮಾನ ಹರಾಜ್ ಆದೆ. ಭಾನುಮತಿನ ಶೀಲದ ಮೇಲೊಂದು ಕಪ್ಪುಗೆರೆ ಬಿದ್ದದೆ.!

ವೈಶಂಪಾಯನ ಜನಮೇಜಯಂಗೆ ಹೇಳ್ದ ಕತೆನ ಕುಶಾಲಪ್ಪ ಗೌಡ್ರು ಪಿಳ್ಳೆಗಳಿಗೆ ಹೇಳಿಕಾಕನ ಮಕ್ಕಳ ಶಕ್ತಿ ಸಾಹಸಗಳ ಕೇಳೊವ್ಕೆ ಕುಸಿ ಆಗುವ ಹಾಂಗೆ ಹೇಳ್ಯೊಳೊ. ಭೀಮ ಕೂಸು ಇರ್‍ಕಾಕನ ನಡ್ದ ಘಟನೆ ಹೀಂಗಿತ್ತ್: ಅಯ್ಯೆ ಕುಂತಿ ಭೀಮಂಗೆ ಎದೆ ಹಾಲ್ ಕುಡಿಸ್ತಿತ್ತ್. ಭೀಮನ ಭಾರ ತಡ್ಕೊಂಬಕೆ ಕುಂತಿಗೆ ಸಾಧ್ಯ ಆತ್‌ಲೆ. ಕೂಸು ಕೈಯಿಂದ ಜಾರಿ ಕೆಳಗೆ ಬೀತ್. ಬಿದ್ದದ್ ಒಂದು ದೊಡ್ಡ ಕಲ್ಲ್‌ನ ಮೇಲೆ ಕುಂತಿಗೆ ಗಾಬರಿ ಆತ್. ಆದ್ರೆ ತುಂಡಾದ್ದ್ ಬಂಡೆಕಲ್ಲ್! ಭೀಮಕೂಸು ನಗ್ತಿತ್ತ್!. ಮತ್ತೊಂದು ಘಟನೆ ಏಕಚಕ್ರ ನಗರದ ಕುಂಬಾರ ಕೇರಿಲಿ ನಡ್ದದ್. ಬಕಾಸುರಂಗೆ ಬಂಡಿ ಅನ್ನ ಕೊಂಡುಹೋವ ವಿಚಾರಲಿ ಬ್ರಾಹ್ಮಣನ ಮನೆಲಿ ಮಾತಾಡ್ತಿದ್ದೊ. ತಾನೆ ಹೋಗಿ ಅವಂಗೆ ಆಹಾರ ಆನೆ ಅಂತ ಬ್ರಾಹ್ಮಣನ ಹೆಣ್ಣ್ ಹೇಳ್ತ್. ಹೇಂಗೂ ಬೇರೆ ಮನೆಗೆ ಹೋಕ್ಕಾದ ನಾನೇ ಹೋನೆ ಅಂತ ಬ್ರಾಹ್ಮಣನ ಮಗ ಹೇಳ್ತ್. ಮನೆಯ ಯಜಮಾನ ನಾ ನಾನೇ ಹೋಕ್ಕಾದ್ ನ್ಯಾಯ ಅಂತ ಬ್ರಾಹ್ಮಣ ಹೇಳ್ತ್. ಆಗ ಬ್ರಾಹ್ಮಣನ ಮಂಜ ಸಣ್ಣ ಹೈದ ಒಂದು ದರ್ಬೆ ತುಂಡ್‌ನ ಕೈಲಿ ಹಿಡ್ಕಂಡ್ ಆ ರಾಕ್ಷಸನ ಸಾಯ್ಸಿಕೆ ಇದ್ ಸಾಕ್. ನಾನೇ ಹೋನೆ ಅಂತ ಹೇಳ್ತ್. ಆಗ ಮನೆಯ ದುಃಖಿಗಳ ಮೋರೆಲಿ ಸಣ್ಣ ನಗು ,ಮಿಂಚಿ ಮಾಸಿಹೋತ್‌ಗಡ. ಇದ್ ಕಾವ್ಯ.

ವಯಸ್ಸಾದ ಮೇಲೆ ಪಾಂಡವು ದ್ರೌಪದಿ ಸಮೇತ ಪರ್ವತ ಹತ್ತುವೆ. ಸ್ವರ್ಗಕ್ಕೆ ಹೋಕೆ ಮೇರು ಪರ್ವತದ ಮೇಲಿಂದ ದಾರಿ. ಶುರೂಗೆ ದ್ರೌಪದಿ ಕೆಳಗೆ ಬಿದ್ದದೆ. ತಮ್ಮಂದಿರ್ ತಿರುಗಿ ನೋಡುವೆ. ಅಣ್ಣ ಧರ್ಮರಾಯ ನೋಡದೆ ಮುಂದೆ ಹೋದೆ. ಹಾಂಗೆ ಒಬ್ಬೊಬ್ಬನೇ ಜಾರಿ ಬಿದ್ದವೆ. ಧರ್ಮರಾಯ ತಿರ್‍ಗಿ ನೋಡದೆ ಮುಂದೆ ಹೋದೆ. ಭೀಮನೂ ಬಿದ್ದದೆ. ಈಗ ತಡ್ಕೊಂಬಕೆ ಆಗದೆ ಭೀಮನ ಶವನ ಹೊತ್ಕಂಡ್ ಧರ್ಮರಾಯ ಮುಂದೆ ನಡ್ದದೆ ಆಗ ದೇವೇಂದ್ರ ನರರೂಪಲಿ ಕಾಣ್ಸಿಕೊಂಡದೆ. ಒಂದು ಒಡಕ್ ಮಡಿಕೆಲಿ ನೀರ್ ತುಂಬಿಸಿಕೊಂಡ್ ಒಣ್ಗಿದ ಮರದ ಬುಡಕ್ಕೆ ಹೊಯ್ದದೆ. ಇದ್ರ ನೋಡಿ, ಇದ್ ಪ್ರಯೋಜನ ಇಲ್ಲದ ಕೆಲ್ಸ ಅಂತ ಧರ್ಮರಾಯ ಹೇಳ್ದೆ. ನೀ ಕೂಡಾ ಅಂತದ್ದೇ ಕೆಲ್ಸ ಮಾಡ್ತಾ ಒಳ ಅಂತ ಹೆಗಲಿನ ಮೇಲಿನ ಶವದ ಕಡೆಗೆ ನೋಡಿಕೊಂಡ್ ದೇವೇಂದ್ರ ಹೇಳ್ದೆ.

ಡಾ. ಕುಶಾಲಪ್ಪ ಗೌಡ್ರು ಮಹಾಭಾರತನ ಸಂಕ್ಷಿಪ್ತವಾಗಿ ಮಾನಸಮಹಾಭಾರತಲಿ ಕಾಣಿಸಿಯೊಳೊ ಸಂಸ್ಕೃತ ಭಾಷೆಯ ಈ ಮಹಾಕಾವ್ಯನ ಅರೆಭಾಸೆಲಿ ಈಗ ಓದ್‌ಕ್. ನಾ ಮಾಡ್ದ್ ಗ್ರಂಥದ ಪರಿಚಯ ಮಾತ್ರ. ಅರೆಬಾಸೆಯ ಅಭಿಮಾನಿಗ ಈ ಗ್ರಂಥನ ಓದೊಕು. ಒಬ್ಬ ಲೇಖಕನ ಗ್ರಂಥಗಳ ಓದಿರೆ ಅದೇ ಪ್ರಶಸ್ತಿ ಸನ್ಮಾನ.

# ಬೇಟೆ

ಡಾ. ಪ್ರಭಾಕರ ಶಿಶಿಲ

ನಮ್ಮೊದ್ ಮಲೆನಾಡ್ ಸುಳ್ಯ ಸೀಮೆ. ಕೊಡಗ್‌ಗೆ ಅಂಟಿಕಂಡೇ ಇರುವ ಊರ್. ಇಲ್ಲಿ ಒಂದ್ ಗುಡಿ ಉಟ್ಟು, ಅದ್ ಬೈನಾಟಿ ಭೂತದ್ದ್. ವರ್ಷಕ್ಕೊಮ್ಮೆ ಬೈನಾಟಿ ಭೂತದ ಜಾತ್ರೆ ಆದೆ. ಬೈನಾಟಿ ಭೂತ ಅಂದ್ರೆ ಅರ್ಜುನ್ನ ಪರೀಕ್ಷೆ ಮಾಡಿಕೆ ಹೊರಟ ಈಸರ ದೇವ್ರ್. ಬೈನಾಟಿ ಜಾತ್ರೆಯಂದ್ ಊರವೆಲ್ಲಾ ಸೇರಿ ಕೂಡು ಬೇಟೆ ಆಡುವೆ. ಈಗ ಕಾಡ್ ಇಲ್ಲೆ, ಮೃಗನೂ ಇಲ್ಲೆ. ಆದ್ರೂ ನಾವೆಲ್ಲಾ ಬೆಡಿ ಹಿಡ್ದ್ ಗುಡ್ಡ ಸುತ್ತಿ ಕಾಲಿ ಕೈಲಿ ಬಂದವೆ. ಸಂಪ್ರದಾಯ ಬುಡಿಕೆ ಬೊತ್ತಲ್ಲೆ?

ಅಂತಾ ಒಂದ್ ದಿನ ಅಪ್ಪಯ್ಯ ಗೌಡ್ರ್ ಬೂತಕಲ್ ಗುಡ್ಡೆ ಮೇಲೆ ಹೇಳ್ದೊ. "ಈ ಗುಡ್ಡೇಲಿ ನಾ ನೂರಾದರೂ ಹುಲಿಗಳ ಕೊಂದಿರುವೆ. ಉಳ್ದ ಚಿಲ್ರೆ ಪಲ್ರೆ ಬುಡಿ. ಆದ್‌ರೆ ಕೂಸಪ್ಪ ಗೌಡ್ರ ಹಾಂಗೆ ನಮ್ಮಂದ ಯಾರಂದ್ಲೂ ಮಾಡಿಕ್ಕೆ ಆತ್ಲೆ ಬುಡಿ."

"ಯಾವ ಕೂಸಪ್ಪ ಗೌಡ್ರ್?"

ಅಪ್ಪಯ್ಯ ಗೌಡ್ರ್ ನಮ್ಮ ಪ್ರಸ್ನೆಗೆ ನೆಗಾಡ್ದೊ. ಹಕ್ಕಲೆ ಇದ್ದ ದೊಡ್ಡ ಬಂಡೆಗಲ್ನ ಮೇಲೆ ಕುದ್ದೋ. ನಾವು ಕೂಡಾ ಸುತ್ತಮುತ್ತ ಕುದ್ದೊ. ತಮ್ಮ ಸಡನ್ಸ್‌ಡೆತ್ತ್ ಬೆಡೀನ ಬಂಡೆ ಮೇಲೆ ಇಸಿ ಗೌಡ್ರ್ ಚೋಯಂಬುನ ಹಕ್ಕಲೆ ಒಂದ್ ಬೀಡಿ ಕೇಳ್ದೊ. ಬೀಡಿ ಎಳ್ಕಂಡ್ರ ಅದ್‌ರ ಹೊಗೇನೆ ನೊಡ್ಕಂಡು ಹಳೇದ್‌ರ ನೆಂಪು ಮಾಡೀಕ್ಕೆ ಸುರುಮಾಡ್‌ದೊ.

“ಆಗ ಈ ಸೀಮೆಗೆ ಅಮರ ಸುಳ್ಯಾಂತ ಹೆಸ್‌ರ್. ಕೊಡಗ್‌ನ ಚಿಕ್ಕವೀರ ರಾಜೇಂದ್ರ ದೊರೆಗಳ ಆಡಳ್ತಕ್ಕೆ ಇದ್ ಒಳಪಟ್ಟಿತ್ತ್. ಅವು ಲಿಂಗಾಯತ್ರ್, ಈ ಸೀಮೇಲಿ ಲಿಂಗಾಯಿತ್ರೆ ಇತ್ಲೆ. ಆದ್‌ರೂ ಜನ ಅವ್‌ರ ಪ್ರೀತಿಸ್ತಿದ್ದೊ.”

ನಮ್ಮ ಕೋಲ್ಚಾರ್ ಕೂಸಪ್ಪ ರಾಜರ ಸೈನ್ಯಲಿ ಇತ್ತ್. ಬರ್ಜರಿ ಆಳಂಗದ ಸೀಪಾಯಿ. ಆರೂವರೆ ಅಡಿಯಸ್ಟ್ ಎತ್ತ್‌ರ ಇತ್ತ್. ಅಗಲ ಮೋರೆ, ದೊಡ್ಡ ಮೂಕು, ಬರ್ಜರಿ ಹುರಿ ಮೀಸೆ ಮತ್ತೆ ಹೆದ್ರಿಕೆ ಹುಟ್ಟುಸ್‌ವ ಕೆಂಪು ಕಣ್ಣುಗ! ಅವ್‌ರ ಬಲವಾದ ತೋಳುಗ, ದೃಢವಾದ ಕಾಲ್‌ಗ, ಮಾಸಲವಾದ ಗಟ್ಟಿ ಶರೀರ ಅವ್‌ರ ನಾಯಕನಾಗಿ ಮಾಡಿತ್ತ್. ಅವ್‌ರ ಸೇನಾ ನಾಯಕ ಕುಳ್ಳ ಕುಂಡೋಚ್ಚ. ಕೂಸಪ್ಪ ಗೌಡ್ರೀಗೆ ಏನಾದ್‌ರೂ ಹೇಳೋ ಕೂಂತಾದ್‌ರೆ ಅವಂಗೆ ತುಂಬಾ ಕಸಿವಿಸಿ ಆತಿತ್ತ್. ಈ ಕೂಸಪ್ಪ ಎಂತಾ ವ್ಯಕ್ತಿಯೆಂದ್‌ರೆ, ಮೊದುವೆಗೆ ಹೋದ್‌ರೆ ಪಂತ ಹಾಕಿ ನಾಲ್‌ಕ್ ಕವಂಗ ಪಾಯ್ಸ ಕುಡೀತ್‌ಗಡ. ಹಲ್ಲ್‌ಂದ ಅಕ್ಕಿ ಮುಡೀ ಎತ್ತ್‌ತೀತ್ ಗಡ!

ಒಂದ್ ಸರ್ತಿ ರಜ ತಕಂಡ್ ಊರಿಗೆ ಬಂದ ಕೂಸಪ್ಪ ಗೌಡರೀಗೆ ಬೇಟೆ ಆಡ್‌ವ ಮನಸ್ಸಾತ್. ಬಾಳ್ ಕತಿ ಸೊಂಟಕ್ಕೆ ಸಿಗ್ಸಿ, ಕೇಪಿನ ಬೆಡಿಗೆ ಮೊದ್ದ್ ಜಡ್‌ದ್ ಅವು ಬಂದದ್ದ್ ಇದೇ ಭೂತಕಲ್ ಗುಡ್ಡೆಗೆ. ಹೆದ್ರಿಕೆ ಅಂತ ಹೇಳ್‌ರೆ ಏನ್‌ತ ಗೊತ್ತೆ ಇರ್‌ದ ಅವು ಒಬ್ಬನೇ ಬೇಟೆಗೆ ಬಂದಿದ್ದೊ ಗಡ.

ಆಗ ಈ ಗುಡ್ಡೆ ಹೀಂಗೆ ಇತ್ಲೆ. ಗಿಡ ಮೊರಂದ ತುಂಬಿ ಎಲ್ಲೆಲ್ಲೂ ಪಚ್ಚೆರ್. ಒಳಗೆ ಸಾಯಂಕಾಲ, ಕಾಟಿ, ಹಂದಿ, ಹುಲಿಗೊ ತುಂಬಿಕೊಂಡಿತ್ತ್ ಗಡ. ಆದ್‌ರೆ ಕೂಸಪ್ಪ ಗೌಡ್ರ್ ಸ್ವಲ್ಪಾನೂ ಹೆದ್ರಿಕೆ ಇಲ್ಲದೆ ಬರುತ್ತಿದ್ದೊ ಗಡ. ಮರದ ಮೇಲಿದ್ದ ಒಂದು ಮುಚ್ಚ ಇವ್‌ರ ನೋಡಿ ‘ಕೀಚ್ ಕೀಚ್’ ಅಂತೇಳಿ ಮತ್ತೊಂದ್ ಮರಕ್ಕೆ ಹಾರಿತ್‌ಗಡ. ಮುಚ್ಚನ ಮಾಸ ಬಾರಿ ರುಚಿ ಗಡ. ಕೂಸಪ್ಪ ಗೌಡ್ರ್ ಬೆಡಿ ಎತ್ತಿದೊ. “ಬೇಡ. ಇದ್ಕಿಂತ ಒಳ್ಳೇದ್ ಸಿಕ್ಕುದು. ಹಾಳಾದ್ದ್ ಮತ್ತೆ ಯಾರ್ ಮೊದ್ದು ಜಡಿಯುದು” ಎಂದು ಕೆಳಗಿಳಿಸಿದೊ.

ಆಗ ಆ ಮರದ ಬುಡದತ್ತ ಅವ್‌ರ ದೃಸ್ಟಿ ಹೋತ್. ಒಂದು ಕ್ಷಣ ಅವು ಮರಗಟ್ಟಿ ಹೋದೊ. ಅಲ್ಲಿ ಎರಡ್ ಹಡೀ ಗಾತ್ರದ ಕಾಟಿಗೊ ಇವರ್ನೇ ನೋಡ್ತಿತ್! ಯಾದಕ್ಕೆ ಗುಂಡು ಹೊಡಿಯೋದು? ಈ ಗುಡ್ಡೇಲಿ ಕಾಟಿಂದ ಜೋರಾಗಿ ಓಡಿಕೆ ಬೊತ್ತು. ಮಳೆಗಾಲು ಆದರ್‌ಂದ ಮರ ಹತ್ತಿ ಬೊದ್ಕಿಕೂ ಬೊತ್ತು.

ಅವು ಗೇನ ಮಾಡಿಕಂಡು ಇದ್ದಾಂಗೆ ಸಣ್ಣ ಕಾಟಿ ಹಾಯಕೆ ಬಾತ್. ಕೂಸಪ್ಪ ಗೌಡ್ರ್ ನೋಟ ನೋಡಿ ಕುದ್ರೆ ಅದುಮಿದೊ. ಕಾಟಿ ಬೀತ್. ನೋಡಿ ಓ ಅಲ್ಲಿ ದೊಡ್ಡ ಗುಂಡಿ ಕಂಡದೆಲ್ಲಾ..... ಅದ್ಕೆ ಕಾಟಿ ಹೊಣ್‌ಕ್ಯಂಡ್ ಹೋಗಿ ಬೀತ್.

ಈಗ ದೊಡ್ಡ ಕಾಟಿ ಕೊಂಬು ಚಾಚಿ ಮುಂದೆ ಬಾತ್. ಮೊದ್ದ್ ಜಡ್ಯಕೆ ಸಮಯ ಇಲ್ಲೆ. ಸಿಟ್ಟ್‌ಂದ ಸುಳುಪಿಕಂಡ್ ಬಾವ ಕಾಟಿನ ನೋಡಿ ಗೌಡ್ರಿಗೆ ಎಲ್ಲಾ ದೇವ್‌ರ,

ಬೂತೊಗಳ ನೆಂಪಾಗಿರ್ದ್. ಮೈಸಾಸುರ್ನ ಅವ್ತಾರದಂಗೆ ಕಾಣ್ವ ಕಾಟಿ ಅವ್ರ ಕುತ್ತದೆಂತಾಕನ ಅವುಕೆ ಸೈನ್ಯಲಿ ದಿನಾ ಮಾಡುವ ಕವಾಯಿತು ನೆಂಪಾಗಿ ಅವು ಕಾಲ್ ಅಗಲ್‌ಸಿ ಮೇಲೆ ಹಾರ್ದೊ. ಕಾಟಿ ತಲೆ ಬೊಗ್ಸಿದರ್ಂದ ಅವು ಸರ್‍ಯಾಗಿ ಬೆನ್ನ್ ಮೇಲೆ ಕುದ್ದಿದ್ದೊ. ಕಾಟಿ ಗಾಬ್ರೀಲಿ ಅತ್ತಿತ್ತ ಓಡೀಕೆ ಸುರು ಮಾಡ್ತ್.

ಹೇಂಗೋ ಸರಿ ಮಾಡಿಕಂಡ ಅವು ತಿರ್ಗಿ ಕಾಟಿನ ಬೆನ್ನು ಮೇಲೆ ಸರ್‍ಯಾಗಿ ಕುದ್ದೊ. ಕಾಟಿನ ದೊಡ್ಡ ಕೊಂಬುಗ ಅವ್ರ ಕೈಗೆ ಸರ್‍ಯಾಗಿ ಸಿಗ್ತಿತ್. ಕೊಂಬ್ ಹಿಡ್ಕಂಡ್ ಜೋರಾಗಿ ಅಲ್ಗ್‌ಸಿಕೆ ಅವು ಸುರು ಮಾಡ್ದೊ. ಕಾಟಿ ತಲೆನ ಅತ್ತಿತ್ತ ಅಡ್ಸಿಕೆ ಸುರು ಮಾಡ್ತ್. ಅವು ಹಿಡ್‌ದ ಪಟ್ಟ್ ಬುಟ್ಟತ್ತಿಲ್ಲೆ. ಬಲವಾಗಿ ಹಿಡ್ದ್ ಕುತ್ತಿಗೆನ ಎಡಕ್ಕೆ ತಿರ್‌ಗಿಸ್ದೊ. ಲಟಕ್ಕ ಸಬುದ ದೊಟ್ಟಿಗೆ ಕುತ್ತಿಗೆ ಮುರ್ತ್. ಕಾಟೀನ ಸರೀರ ಹೊಣ್‌ಕಿ ಹೊಣ್‌ಕಿ ಅಲ್ಲೇ ಆ ಹೊಂಡಕ್ಕೆ ಬೀತ್."

* * * * *

ಆಗ ಇಂಗ್ಲೀಷರ ಆರ್‌ವಾಡ ಜೋರಿದ್ದ ಕಾಲ. ಮೈಸೂರ್ನ ಸ್ವಾಧೀನ ಮಾಡ್ಕೊಂಡ ಮೇಲೆ ಅವ್ರ ಕಣ್ಣ್ ಕೊಡಗ್‌ನ ಮೇಲೆ ಬೀತ್. ಅವ್ರ ಯಜಮಾನಿಕೆ ಒಪ್ಪಿಕೊಣೊಕು ಅಂತೇಳಿ ಅವ್ರ ಕಣ್ಣ್ ಕೊಡಗ್‌ನ ಮೇಲೆ ಬೀತ್. ಅವ್ರ ಯಜಮಾನಿಕೆ ಒಪ್ಪಿಕೊಣೊಕು ಅಂತೇಳಿ ರಾಜಂಗೆ ಕರೆ ಬಾತ್. ರಾಜನ ಸೇನಾಪತಿಗೊ ಯುದ್ಧ ಮಾಡೋಮಾ ಅಂತ ಹೇಳ್ದೊಗಡ. ಸೇನೆಲಿ ಬರಿಕೈಲಿ ಹುಲಿಕೊಂದ ನಂಜಯ್ಯ ಎಂಬ ಸುಬೇದಾರ ಇತ್ತ್. ನಮ್ಮಲ್ಲಿ ಕೋಟಿ ಚೆನ್ನಯ್ಯರ್ ಒಳೊಲ್ಲ. ಹಾಂಗೆ ಸೇನೆಲಿ ಕರ್ತು ಮತ್ತು ಚೆಟ್ಟಿ ಅಂತ್ ಇಬ್ರ್ ಮಲೆ ಕುಡೀರು ಒದ್ದೊಗಡ. ಬಾಳ ಧೈರ್ಯವಂತೊಗಡ. ಕೂಸಪ್ಪ ಗೌಡ್ರ್ ಕೇಳ್‌ದೇ ಬೇಡ. ಇವು ಎಲ್ಲಾ ಯುದ್ಧಕ್ಕೆ ತಯರಾಕನ ದೀವಾನ ಅಡ್ಡಿ ಮಾಡ್ತ್‌ಗಡ. ರಾಜಿ ಮಾಡ್‌ದೇ ಒಳ್ಳೇದ್ ಅಂತ ರಾಜನ್ನ ಒಪ್ಪಿಸಿದೊಗಡ. ಯುದ್ಧನೇ ಇಲ್ಲ್‌ದೆ ಕೊಡಗು ಇಂಗ್ಲೀಷರ ಕೈಗೆ ಹೋತ್. ಅವು ರಾಜನ ಬಲಾತ್ಕಾರಲಿ ಕಾಸಿಗೆ ಓಡ್ಸಿದೊ ಗಡ.

ಆಗ ರಾಜನಿಸ್ತ್ರ ಅಮರ ಸುಳ್ಯಕ್ಕೆ ಬಂದೊ. ಅವುಕ್ಕೆ ಆಸ್ರಯ ಸಿಕ್ಕಿದ್ದ್ ಕೆದುಂಬಾಡಿ ರಾಮ ಗೌಡ್ರಲ್ಲಿ. ಇಂಗ್ಲೀಷರು ಹೊಸೆಮು ಮತ್ತು ಉಪ್ಪುಗೆ ತೆರಿಗೆ ಹಾಕಿದ್ದೊ. ಕಂದಾಯ ಹಣ ರೂಪಲೇ ಕೊಡೊಕುಂತೇಳಿ ಸಾಸ್ನ ಮಾಡ್ದೋ. ಅದ್ ಇಲ್ಲಿನ ಬೇಸಾಯಗಾರ್‍ರ ಕೆರಳಿಸೀತ್. ಕೆದುಂಬಾಡಿ ರಾಮ ಗೌಡ್ರ್ ಆಗ ಅಮರ ಸುಳ್ಯ ಸೀಮೇಲಿ ತುಂಬಾ ಹೆಸರು ಗಳ್‌ಸಿದ್ದೊ. ಕೂಸಪ್ಪ ಗೌಡ್ರಿಗೂ ಜನ ಬೆಂಬಲ ಇತ್ತ್. ಇವೆಲ್ಲಾ ಸೇರಿ ಸೋಮವಾರಪೇಟೆ ಕಡೆಯ ಒಬ್ಬ ಲಿಂಗಾಯ್ತನ್ನ ಕರ್ಕೊಂಡು ಬಂದೊ. ಅವಂಗೆ ಕಲ್ಯಾಣಪ್ಪಂತ ಹೆಸ್ರು ಕೊಟ್ಟು, ರಾಜ್‌ರ ನೆಂಟಂತೇಳಿ ಸುದ್ದಿ ಹಬ್ಸಿ ಸೇನಾಪತಿ ಮಾಡಿ

ಸೇನೆ ಕಟ್ಟಿದೊ. ಇಂಗ್ಲೀಸ್‌ರ ಕಂದಾಯ ತೆಗ್ದು ಹಾಕಿ ಮೂರು ವರ್ಸ ಕಂದಾಯ ಮಾಪಿ ಅಂತೇಳಿ ಇಸ್ತಿಯಾರು ಹೊರಡಿಸಿದೊ.

ಕೇಳ್‌ದೇನ್? ಅಮರ ಸುಳ್ಯದ ಬೇಸಾಯಗಾರ್ರೆಲ್ಲಾ ಜಾತಿ ಮರ್ತು ಒಂದಾದೊ. ರಾಜ್‌ರ ಸೈನ್ಯದ ಸೈನಿಕಂಗ ಈ ಸುದ್ದಿನ ಕೇಳಿ ತುಂಬಾ ಜನ ಒಂದಾಗಿ ಅಮರ ಸುಳ್ಯಕ್ಕೆ ಬಂದೊ. ಜನವೋ ಜನ. ಸಿಕ್ಕಿದ್ದೇ ಆಯುಧ. ಬೆಳ್ಳಾರೆ, ಪಂಜ, ಪುತ್ತೂರು, ವಿಟ್ಲ, ಪಾಣೆಮಂಗಳೂರು ಆಗಿ ದೊಡ್ಡ ಪಡೆ ಮಂಗಳೂರಿಗೆ ಹೋತ್. ಅಲ್ಲಲ್ಲಿ ತುಂಡರಸ್ರ್ ಸೈನ್ಯನ ಸೇರಿಕೊಂಡೊ. ಈ ದೊಡ್ಡ ಸೈನ್ಯದ ಎದ್‌ರ್ ನಿಲ್ಲೀಕೆ ಆಗ್‌ದೆ ಇಂಗ್ಲೀಸ್ರ್ ಕಣ್ಣಾನೂರ್‌ಗೆ ಓಡ್ದೊ.

'ಕಲ್ಯಾಣಪ್ಪ ರಾಜ್ಯಪಾಲ ಆತ್. ಹದಿಮೂರ್ ದಿನ ರಾಜ್‌ರ ಹೆಸ್ರೀಲಿ ಆಡಳ್ತೆ ನಡೆಸ್ತ್. ಹದಿಮೂರ್ನೆ ರಾತ್ರೆ ಕಲ್ಯಾಣಪ್ಪನ ಪಡೆ ನಿದ್ರೆ ಮಾಡಿಕೊಂಡಿರಕನ ಇಂಗ್ಲೀಸ್‌ರ ದೊಡ್ಡ ಪಡೆ ಬೆಡಿ, ಫಿರಂಗಿ ಒಟ್ಟಿಗೆ ಧಾಳಿ ಮಾಡ್ತ್. ಕಲ್ಯಾಣಪ್ಪ ಮತ್ತು ಅವುನ ಬಂಟ್ರ್‌ಗಳ ಇಂಗ್ಲೀಸ್ರು ಗಲ್ಲಿಗೇರಿಸಿದೊ."

* * * * *

ಅಪ್ಪಯ್ಯ ಗೌಡ್ರ್ ಕತೆ ನಿಲ್ಸಿದೊ. ನಾವು ಕಲ್ಲ್‌ನಂಗೆ ಕುದ್ದಿದೊ. ಬಾಡು ನಾಯ್ಕ ಲೋಚಗುಟ್ಟಿತ್ "ಅಯ್ಯೋ ಪಾಪ. ಕೂಸಪ್ಪ ಗೌಡ್ರ್ ಹಂಗಾರೆ ಮಂಗ್ಳೂರ್ಲೇ ಸತ್ತ್ ಹೋತ್ ಅಮತ ಬೇಜಾರಿಲಿ ಹೇಳ್ತ್.

"ಇಲ್ಲೆ ಇಲ್ಲೆ" ಅಪ್ಪಯ್ಯ ಗೌಡ್ರ್ ಹೇಳ್ದೊ. "ಕಲ್ಯಾಣಪ್ಪ ಮಂಗ್ಳೂರ್‌ನ ವಸ ಮಾಡ್ದ್ ಗೊತ್ತಾಕನ ಮಡ್ಕೇರಿಲಿ ಇಂಗ್ಲೀಸರ ಸೈನ್ಯಾಧಿಕಾರಿ ಲೀಹಾರ್ಡಿ ಅಮರ ಸುಳ್ಯಕ್ಕೆ ಸೇನೆಯೊಟ್ಟಿಗೆ ಬಾತ್. ಇದ್ ಗೊತ್ತಾಗಿ ಕಲ್ಯಾಣಪ್ಪ ಕುಡಿಯ ಸೋದರ್ರು ಕೂಸಪ್ಪ ಗೌಡ್ರೊಟ್ಟಿಗೆ ಅಮರ ಸುಳ್ಯಕ್ಕೆ ಸೇನೆನ ಕಳಿಸಿಕೊಟ್ಟತ್ತ್. ಕುಡಿಯ ಸೋದರ್ರು ಲೀಹಾರ್ಡಿಗೆ ಸಿಕ್ಕಿ ಬಿದ್ದೊ. ಕೂಸಪ್ಪ ಗೌಡ್ರು ತೊಪ್ಪುಸಿ ಕೊಂಡು ಓಡ್ದೊ."

ಅಪ್ಪಯ್ಯ ಗೌಡ್ರ್ ಇನ್ನೊಂದು ಬೀಡಿ ತಕಂದ. ಹೊಗೆ ಬುಟ್ಟುಕಂಡ್ ಮತ್ತೆ ಕತೆ ಮುಂದುವರ್ಸಿದೊ. "ಕೂಸಪ್ಪ ಗೌಡ್ರ್ ಓಡಿದ್ದ್ ಇಂಗ್ಲೀಸ್ರಿಗೆ ಹೆದ್ರಿ ಅಲ್ಲ. ಜನ್ರ ಒಪಾಸು ಒಟ್ಟಿಗೆ ಮಾಡಿ ಇಂಗ್ಲೀಸ್‌ರ ಓಡ್ಸಿಕೆ. ಈ ಪೆರುಮುಂಡ, ಕರಿಕ್ಕೆ, ಕೋಲ್ಚಾರು, ಆಲೆಟ್ಟಿ, ಅಜ್ಜಾವರ, ಉಳುವಾರು, ಪೆರಾಜೆ, ನಿಡ್ಯಮಲೆ, ಅರಂತೋಡು, ಕಾಂತಮಂಗ್ಲ, ಮಂಡೆಕೋಲ್, ಸುಳ್ಯ, ತೊಡಿಕ್ಕಾನ ಸುತ್ತಿ ಬೇಸಾಯಗಾರ್ರ ಒಟ್ಟ್ ಸೇರ್ಸಿಕೆ ಸುರು ಮಾಡ್ದೊ. ಕಲ್ಯಾಣಪ್ಪನ ಗಲ್ಲಿಗೇರಿಸಿದ್ದಕ್ಕೆ ಕಂದಾಯ ಕಟ್ಬೇಡಿ ಎಂದು ಎಲ್ಲವುಕ್ಕೆ ಹೇಳ್ದೊ. ಅಮರ ಸುಳ್ಯ ಮಾಗಣೆಂದ ಒಂದು ಕಾಸೂ ಕಂದಾಯ ಸಿಕ್ಕದೆ ಹೋಕನ ಲೀಹಾರ್ಡಿ ಗೂಢಚಾರ್ರ ಅಟ್ಟಿತ್. ಕೂಸಪ್ಪ ಗೌಡ್ರ ಕಾರ್‌ಬಾರ್ ತಿಳ್ದ್ ಸಿಟ್ಟ್ ಬಾತ್. ಗೌಡ್ರ ತಲೆಗೆ

ಹತ್ತು ಸಾರ ರೂಪಾಯಿ ಬೊಹುಮಾನ ಘೋಷಣೆ ಮಾಡ್ತ್. ಲಿಹಾರ್ಡಿನ ಪರ್ಮಾನು ಹೊರಟ ಮೇಲೆ ಕೂಸಪ್ಪ ಗೌಡ್ರ್ ಅಡಂಗಿಕೊಂಡ್ ತಿರ್ಗಿಕೆ ಸುರು ಮಾಡ್ಡೊ. ಸಾವುನ ಹೆದ್ರಿಕೆಂದ ಅಲ್ಲ. ಸಿಕ್ಕಿ ಬಿದ್ದರೆ ಇಂಗ್ಲೀಸ್ರ ವಿರುದ್ಧ ಹೋರಾಡೊವು ಇಲ್ಲೇಂತ ಆದೆ ಎಂದ್ ಅವುಕೆ ಗೊತ್ತಿತ್ತ್."

ಸ್ವಲ್ಪ ಹೊತ್ತ್ ಅಪ್ಪಯ್ಯ ಗೌಡ್ರ್ ನಿಲ್ಸಿದೊ. ನವುಗೆ ತುಂಬಾ ಕುತೂಹಲ ಆಗಿತ್ತ್. ತಡ್ಯಕ್ಕೆ ಆಗ್ದೆ ಕೇಳ್ದೊ.

"ಮುಂದೇನಾತ್?"

ಅಪ್ಪಯ್ಯ ಗೌಡ್ರ್ ನಿಟ್ಟುಸಿರ್ ಬುಟ್ಟೊ. "ಆದ್ ಏನ್? ದುಡ್ಡ್‌ನ ಆಸೆ ಯಾರಿಗೆ ಇರ್ದುಲೆ ಹೇಳಿ? ಕೂಸಪ್ಪ ಗೌಡ್ರು ಅಡಂಗುವ ಜಾಗೆನ ಯಾರೋ ಒಬ್ಬ ಲೀಹಾರ್ಡಿಯ ಸೈನಿಕರಿಗೆ ತೋರ್ಸಿತ್."

"ಅದ್ ಮಂಡೆಕೋಲಿನ ಒಬ್ಬ ಮಧ್ಯಮ ವರ್ಗದ ಬೇಸಾಯಗಾರ್ನ ಮನೆ. ಮಳೆಗಾಲದ ಕರ್ಚಿಗೇಂತೇಳಿ ಅಟ್ಟದ ಮೇಲೆ ಅವ ಮುಡೀನ ಸರ್ರ್ಯಾಗಿ ಜೋಡ್ಸಿ ಇಟ್ಟಿತ್. ಸೈನಿಕ್ರ ನೋಡ್ದ ಕೂಸಪ್ಪ ಗೌಡ್ರು ಅಟ್ಟಹತ್ತಿ ಮುಡಿಗಳ ಹಿಂದೆ ಅಡಗಿ ಕುದ್ದತ್. ಸೈನಿಕಂಗ ಎಂಟು ಜನ ಇದ್ದೊ. ಆದ್ರೂ ಅಟ್ಟಕ್ಕೆ ಹತ್ತಿಕೆ ಸುರುಗೆ ಅವುಕೆ ಧೈರ್ಯ ಬಾತ್ಲೆ. ಕಡೇಗೆ ಹಣದ ಆಸೆ ಗೆದ್ದತ್. ಇಬ್ಬೊರು ಧೈರ್ಯ ಮಾಡಿ ಸುರುಗೆ ಅಟ್ಟ ಹತ್ತಿದೊ. ಉಳ್ದೊವು ಹಿಂದೆಂದ ಹತ್ತಿದೊ. ಕತ್ತಿ ಹಿಡ್ಕೊಂಡ್ ನಿಧಾನಲಿ ಮುಂದೆ ಹೋದೊ.

ಕೂಸಪ್ಪ ಗೌಡ್ರ್ ಆಗ್ಲೂ ಹೆದರ್ತ್ಲೆ. ತನ್ನಕಲೆ ಇದ್ದ ಅಕ್ಕಿ ಮುಡಿನ ಎತ್ತಿ ಒಬ್ಬ ಸೈನಿಕ ಮೇಲೆ ಬಿಸಾಡ್ದೊ. ಅಂವ ಬೇನೆಲಿ ಅಯ್ಯಯ್ಯೋ ಅಂತೇಳಿ ಬೊಬ್ಬೆ ಹಾಕಿತ್. ಕೂಸಪ್ಪ ಗೌಡ್ರ್ ಇನ್ನೊಂದ್ ಅಕ್ಕಿ ಮುಡಿ ತೆಗ್ದ್ ಬಿಸಾಡ್ದೊ. ತಪ್ಪಿಸಿಕೊಂಡ್ ಸೈನಿಕಂಗ ಅವುರ ಸುತ್ತು ಹಾಕ್ದೊ. ಸಿಟ್ಟಿಲಿ ಕೂಸಪ್ಪ ಗೌಡ್ರ್ ಒಂದೇ ಸಮನೆ ಅಕ್ಕಿ ಮುಡೀನ ಎತ್ತಿ ಬಿಸಾಡಿಕೆ ಸುರು ಮಾಡ್ದೊ. ಆಗ ಒಬ್ಬ ಸೈನಿಕ ಅವ್‌ರ ಎಡ ಬಾಗಲಿ ಕತ್ತೀನ ಸರ್ರ್ಯಾಗಿ ಬೀಸಿತ್. ಅವ್‌ರ ಎಡಕೈ ತುಂಡಾಗಿ ಕೆಳಗೆ ಬೀತ್. ಆ ಬಲಬಾಲಿ ಸೈನಿಕ ಕೊರ್ಳಿಗೆ ಸರ್ರ್ಯಾಗಿ ಕತ್ತಿ ಬೀಸಿತ್. ಅಲ್ಲಂತ ರಕ್ತ ಚುಮ್ಮಿ ಅವ್‌ರ ರುಂಡ ಮುಂಡಂದ ಬೇರ್ಯಾಗಿ ಕೆಳಕ್ಕೆ ಬೀತ್. ಸೈನಿಕ್ರ ಮುಖಕ್ಕೆ ರಕ್ತದ ಓಕುಳಿ ಆತ್. ತಲೆಕಡ್ದ ಸೈನಿಕ ಬಿದ್ದ ರುಂಡನ ಎತ್ತಿಕೊಂಡ್ ಅಟ್ಟಾಸ ಹಾಕ್ತ್."

ಕತೆ ಮುಗ್ಯಕನ ಎಲ್ರ ಕಣ್ಣ್‌ಲಿ ನೀರ್ ತುಂಬಿತ್ತ್. ಅಪ್ಪಯ್ಯ ಗೌಡ್ರ್ ಎದ್ದೊ. "ನಿವುಗೆ ಅಂದಿಗ್ಯೆಮು ಅಪ್ಪದಿಟ್ಟು ತಿಂಬ ಯೋಗ ಇಲ್ಲೆ ನಡಿನಿ" ಎಂತ ಹೇಳ್ದೊ.

ಅಂದಿ ಕಾಂಬುಕೆ ಸಿಕ್ರೂ ಅವುಕೆ ಅಂದ್ ಅದ್ರ ಕೊಲ್ಲಿಕೆ ಮನ್ಸ್ ಬಾತಿತ್ತೊ ಇಲ್ಲೆನೋ!

* * * * *

# ಮನ್ಸದು ಕೂಸು

– ಚಂಗಪ್ಪ ಹೆಚ್. ಆರ್

ಗೋಣಿಕೊಪ್ಪ ದಸರ ನೋಡ್ದ ಮಣಿ ಮಾರ್‍ನೆ ದಿನ ಬೆಳಿಗ್ಗೆ ಒಂಬತ್ ಗಂಟೆ ಮುಟ್ಟ ಬಸ್ ಸ್ಟ್ಯಾಂಡ್‌ಲೇ ಕುದ್ದಿತ್‌ಗಡ. ಆಕಳ್ಸಿಕಂಡ್ ಎದ್ದಂವ ಅಲ್ಲೆ ಇದ್ದ ನಲ್ಲಿಲಿ ಮುಕಕ್ಕೆ ನೀರ್ ಹಾಕಂಡ್ ಮಾರ್ಕೆಟ್‌ಗೆ ಹೋತ್. ಒಣ್ಗಿಲ್ ಮೀನ್ ಅಂಗ್ಡಿಂದ ಒಂದ್ ಕೇಜಿ ಚೆರಾವ್, ಅರ್ದ ಕೇಜಿ ಹ್ಯಾಟೆ ಮೀನ್ ಕಟ್ಟಿಕಣ್ತ್. ಕುರಿ ಮಾಸ ಅಂಗ್ಡಿ ಎದ್ರ್ ಗೂಡಂಗ್ಡಿಲಿ ನೈಯಪ್ಪ ಒಟ್ಟಿಗೆ ಬೊಳ್ಳ ಚಾಯ ಕುಡ್ದು ಬೆಳಿಗೆದ್ ಕಾಪಿ ಕುಡಿಯುವ ಶಾಸ್ತ್ರ ಮುಗಿಸಿತ್. ರೋಡ್ ಬರಿ ಅಂಗ್ಡಿಲಿ ಜನಗ ಹಂದಿ ಪಸ್ನ ಮಾಡ್ತಾ ಇದ್ದೊ. ಹಸಿಮೀನ್ ಅಂಗ್ಡಿ ಹೈದ ಇವನ ನೋಡ್ತಾ ಇತ್ತ್. ಇಲ್ಲಿ ನಿತ್ತರೆ ಹಸಿ ಮೀನ್ ಹಿಡ್ಸಿಬುಡುದುತೇಳಿ ಅಲ್ಲಿಂದ ಬೇಗ ಜಾಗ ಕಾಲಿ ಮಾಡ್ತ್.

ಮಮತ ಟಾಕಿಸ್ ಕಡೆ ಹೋದ ಮಣಿ ಮಾರ್ನಿಂಗ್ ಶೊ ಇಂಗ್ಲಿಷ್ ಫಿಲ್ಮ ನೋಡಿ ಮಧ್ಯಾನ ಆಕನ ಬಸ್ ಸ್ಟ್ಯಾಂಡ್‌ಗೆ ಬಾತ್. ಪಳ್ಳಿಗೆ ತಿರ್ಗುವ ರೋಡ್ ಮೂಲೆಲಿ ನಿತ್ತಿದ್ದ ಮಡಿಕೇರಿ ಬಸ್‌ಗೆ ಹತ್ತಿ ಕುದ್ದಂವ ದಸರದ್ ಫ್ಲ್ಯಾಶ್ ಬ್ಯಾಕ್‌ಗೆ ಹೋದೆ. ಒಂದ್ ತೇರ್‌ಲಿ ನವ ಗ್ರಹಗ ಕಲರ್ ಕಲರ್ ಲೈಟ್‌ಗಳ್‌ನ ಭೂಮಿಗೆ ಕಳ್‌ಸ್ತಾ ವೈಕುಂಠಕ್ಕೆ ಪ್ರದಕ್ಷಿಣೆ ಹಾಕುದು, ವೈಕುಂಠಲಿ ಶ್ರೀಮನ್ ನಾರಾಯಣ ನಾಲ್ಕು ಕೈಗಳ್‌ಲಿ ಶಂಕು, ಚಕ್ರ, ಗದೆ, ಹೂವು ಹಿಡ್ಕಂಡ್ ಇಡೀ ಪ್ರಪಂಚಕ್ಕೆ ಆಶೀರ್ವಾದ ಮಾಡ್ದು. ದೇವ್ರುದು ಪ್ರೀತಿ ಕರುಣೆ ತುಂಬಿದ ಕಣ್‌ಗಳ್‌ನ ನೋಡ್ದ ಮಣಿ ದಸರಕ್ಕೆ ಬಂದದ್ ಸಾರ್ಥಕ ಆತೂಂತ ಮನ್ಸುಲೆ ಗ್ಯಾನ ಮಾಡಿಕಣ್ತ್.

ನವ ಗ್ರಹಗಳ್‌ನ ನೋಡಿಕನ ಮಣಿಗೆ ಮಂಗಳ ಗ್ರಹನ ಗ್ಯಾನ ಆತ್. ಗಾಯತ್ರಿ ಮಂತ್ರಲಿ ಒಂದ್ ಮಂತ್ರ ಉಟ್ಟು. "ಶಕ್ತಿ ಹಸ್ತಾಯ ವಿಧ್ಮಹೇ ಭೂಮಿ ಪುತ್ರಾಯ ಧೀಮಹೀ ತನ್ನೊ ಅಂಗಾರಕ ಪ್ರಚೋದಯಾತ್". ನಮ್ಮ ಪೂರ್ವ ಕಾಲದ ಋಷಿಗ ಮಂಗಳ ಗ್ರಹನ ಭೂಮಿದ್ ಪುತ್ರಾಂತ ಹೇಳಿಯೊಳೊ. ಭೂಮಿನ ಬುಟ್ಟರೆ ವಾಸ ಮಾಡಿಕೆ ಆಗುವ ಇನ್ನೊಂದ್ ಜಾಗ ಮಂಗಳ ಗ್ರಹಾಂತ ಋಷಿಗ ಅವರ ತಪಸ್ ಶಕ್ತಿಂದ ತಿಳ್ಕೊಂಡಿದ್ದೋಂತ ಕಂಡದೆ! ಅಪ್ಪ ಅಮ್ಮ ಮಕ್ಕಳ ಮನೆಗೆ ಹೋಗುವಂಗೆ ವಿಜ್ಞಾನಿಗ ಜನಗಳ್‌ನ ಭೂಮಿ ಪುತ್ರನ ಹತ್ರ ಕಳ್ಸುವ ಏರ್ಪಾಡ್ ಮಾಡ್ತಾ ವೋಳೊ.

ದಸರ ಆರ್ಕೆಸ್ಟ್ರಾಲಿ " ಚೆರಿಯ ಮನೆಲ್ ಇಪ್ಪುಳಿಯ, ಬಲ್ಯ ಮನೆಲ್ ಇಪ್ಪುಳಿಯ, ನಲ್ಲ ಮನೆ ಕಟ್ಟಿತಪ್ಪೊಳೆ ಬಪ್ಪುಳಿಯ, ನನ್ನ ನೀನ್ ಮಂಗಲ ಆಪಕ್ ಒತ್ತೊಳಿಯ, ಅರೇ ನನ್ನಾ ನೀನ್ ಮಂಗಲ ಆಪಕ್ ಒತ್ತೊಳಿಯ" ಪಾಟ್ಗೆ ಕುಣ್ದು ಕುಣ್ದು ಮಣಿದ್ ಕೈ ಕಾಲ್ ಬಚ್ಚಿ ಹೋಗಿದ್ದದೆ. ಬಸ್‌ಲಿ ಕುದ್ದ ಮಣಿಗೆ ಸೀಟ್‌ಲಿ ಒರ್ಗಿದೊಂದೆ ಗೊತ್ತ್, ವಿರಾಜಪೇಟೆ ಗಡಿಯಾರ ಕಂಬದ ಹತ್ರ ಬಸ್ ನಿಲ್ಲಿಕನ ಎಚ್ಚರ ಆದ್. ಸಣ್ಣಪ್ಪನ

ಸೋಡ ಸಾಪ್‌ಲಿ ಹಾಕಿದ ಎರ್ಡ್ ಔನ್ಸ್ ಬರೀಸ್‌ದ್ ಘಾಟ್ ಬಸ್ ತುಂಬಾ ತುಂಬಿ ಹೋಗಿತ್ ಬಸ್ ಕಂಡಕ್ಟರ್ ಅಪ್ಪಂಗಳದ ಅಪ್ಪಿ ಬಂದ್ ಮಣಿನ ಮಾತಾಡ್‌ಸ್ತ್. ಮಣಿ ಮತ್ತೆ ಅಪ್ಪಿ ಒಂದೇ ಶಾಲೆಲಿ ಓದಿದವ್. ಮರದ ಕೊಂಬೆ ಮೇಲೆ ಬಸ್ ಆಟ ಆಡಿಕನ ಬಸ್ ಕಂಡಕ್ಟರ್ ಆಗಿ ಟಿಕೆಟ್ ಟಿಕೆಟ್‌ತ ಸಿಗರೇಟ್ ಪ್ಯಾಕ್‌ನ ಹರ್ದ್ ಕೊಡ್ತಾ ಇದ್ದ ಅಪ್ಪಿ ಇಂದ್ ನಿಜಾಗಿಯೂ ಕಂಡಕ್ಟರ್ ಆಗುಟ್ಟು! ಅಂವ ಕಂಡಕ್ಟರ್ ಆಕೂಂತ ಆಗಲೇ ಮನ್ಸ್‌ಲಿ ಗ್ಯಾನ ಮಾಡಿಕಂಡಿತ್‌ಗಡ. ತಾಯಿಮನೆ ಮುತ್ತಮ್ಮವ್ವ ಸಾಯ್‌ಂಕಾಲ ಆಕನ ಮಣಿನ ಮನೆಗೆ ಬಂದ್ ಐಮರಲಿ ಕುದ್ಕಂಡಿದ್ದವೆ. ಮಣಿದ್ ಹೆಣ್ ಮುತ್ತು ಬಾಡೆಲಿ ದೇವ್ರ್ ದೀಪ ಮಡ್ಗ್ತಾ ಇದ್ದವ್ಳ್ ಹೊರಗೆ ಬಂದ್ ನೆಂಟ್ರ್‌ಗೆ ನೀರ್ ಕೊಟ್ಟ್ ಕಾಲ್ ಹಿಡ್ದ್ ಮಾತಾಡ್ಸಿದೆ. ಕಾಪಿ ಕುಡಿಯಕೆ ಕೊಟ್ಟ್ ಕೈಯಾಲೆ ಬೆಂಚಿಲಿ ಕುದ್ಕಂಡ್ ಅವ್ವನ ಹತ್ರ ಕಷ್ಟ ಸುಕ ಮಾತಾಡ್ಕೆ ಸುರು ಮಾಡ್ದೆ. ಮನೆಗೆ ನೆಂಟ್ರ್ ಬಂದವೆ. ನಮ್ಮ ಕೋಳಿನ ಕೀರಿಯೋ ಪೆರ್ಪಣನೋ ಹಿಡ್ದ್‌ಬುಡ್ತ್ ನಿಮ್ಮ ಹತ್ರ ಕೋಳಿ ಉಟ್ಟಾಂತ ಅವ್ವ ಕೇಳ್ತ್. ನೆನ್ನೆ ಕೆರೆ ಹತ್ರ ಒಂದ್ ಕುರ್ಕ ಓಡ್ತಾಯಿತ್ ಅದೇ ಹಿಡ್ದಿರಕೂಂತ ಮುತ್ತು ಹೇಳಿಕೆ ಆತ್.

ಕೋಂಬರೆಲಿ ಇದ್ದ ಮಣಿ ಹೊರಗೆ ಬಂದಂವ ಅವ್ವನ ಕಾಲ್ ಹಿಡ್ದ್ ಮಾತಾಡ್‌ಸಿ ಎಲೆ ತಟ್ಟೆ ಮುಂದೆ ಮಡ್ಗಿದೆ. ಹಂಗೇ ಮಾತಾಡಿಕಂಡ್ ಇರ್ಕನ ಬಸ್‌ಲಿ ಅಪ್ಪಿನ ಕಂಡದ್ ಹೇಳಿ, ಅದ್ ಹೆಂಗೆ ಅವ್ವ ಎಲ್ಲವೂ ಗ್ಯಾನ ಮಾಡ್ದಂಗೆ ಆದುಲ್ಲೆ. ಅಪ್ಪಿ ಮಾತ್ರ ಕಂಡಕ್ಟರ್ ಆಕೂಂತ ಗ್ಯಾನ ಮಾಡಿಕಂಡಿದ್ದವ ಕಂಡಕ್ಟರೇ ಆತ್? ಅಂವ ಕಲೆಕ್ಟರ್ ಆಕೂಂತ ಗ್ಯಾನ ಮಾಡಿದ್ರೆ ಕಲೆಕ್ಟರ್ ಆಗ್‌ತಿತ್ತಾ? ತ ಮಣಿ ಅವ್ವನ ಕೇಳ್ದೆ.

ಅವ್ವ ಹೇಳ್ದೆ – ನರ ಮನ್ಸಂಗೆ ಕಣ್‌ಗೆ ಕಾಂಬುವ ಸರೀರ ಇರ್ವಂಗೆ ಕಣ್‌ಗೆ ಕಾಂಬದಂಗೆ ಆತ್ಮ ಮತ್ತೆ ಮನ್ಸ್ ಓಳೊ. ಆತ್ಮ ಸರೀರಲಿ ಇರ್ವ ಜುಂವ(ಪ್ರಾಣ).

ಮನ್ಸ್‌ಲಿ ಬುದ್ದಿ ಮತ್ತೆ ಸೊಯ (ಪ್ರಜ್ಞೆ )ಂತೇಳುವ ಎರ್ಡ್ ಬಲ(ಶಕ್ತಿ)ಗ ಓಳೊ. ಮತ್ತೆ ಮನ್ಸ್‌ಲಿ ಎರ್ಡ್ ತರ ಮನ್ಸ್‌ಗ ಓಳೊ. ಒಂದಕ್ಕೆ ಜಾಗ್ರತ ಮನ್ಸೂಂತ ಹೇಳ್ವೆ, ಇನ್ನೊಂದಕ್ಕೆ ಸುಪ್ತ ಮನ್ಸೂಂತ ಹೇಳ್ವೆ, ಬುದ್ದಿಂದ ಗ್ಯಾನ ಮಾಡ್ದ ಎಲ್ಲಾ ಸಂಗತಿಗ ಜಾಗ್ರತ ಮನ್ಸುಗೆ ಬಂದ್ ಮರ್ತ್ (ಉಜ್ಜಿ) ಹೋದೆ. ಸೊಯಂದ ಗ್ಯಾನ ಮಾಡ್ದ ಸಂಗತಿಗ ಸುಪ್ತಮನ್ಸ್‌ಗೆ ಬಂದವೆ. ಸುಪ್ತಮನ್ಸ್‌ಗೆ ಬಂದ ಎಲ್ಲಾ ಸಂಗತಿಗ ಪೂರೈಸುವೆ. ಒಳ್ಳೆ ಕೆಲ್ಸ ಮಾಡ್‌ರೆ ಪುಣ್ಯ ಸಿಕ್ಕಿದೆ. ಕೆಟ್ಟ ಕೆಲ್ಸ ಮಾಡ್‌ರೆ ಪಾಪ ಸಿಕ್ಕಿದೆ. ಆ ಪಾಪ ಪುಣ್ಯಗ ಮನ್ಸನ ಹಣೆಬರ ಆದವೆ. ಅದ್ಕೆ ಹಣೆಬರನ ಮನ್ಸುದು ಕೂಸುಂತ ಹೇಳ್ವೆ.

ಕೂಸು ಹುಟ್ಟಿಕನ ಕಾಡ್ ಮನ್ಸನ ಕಾಲದ ಅದರ ಚಾಂಪ, ಚಾಮಿಯವ್ವಂದ ಸುರಾಗಿ ಅಪ್ಪ ಅಮ್ಮನವರೆಗೆನ ಎಲ್ಲಾ ಹಿರಿಯರ ಹಣೇಬರಗಳ್‌ನ ಗಂಟ್ ಕಟ್ಟಿಕಂಡ್ ಬಂದ್ ಇಲ್ಲಿ ಅಳಿಕೆ ಸುರು ಮಾಡ್ದೆ. ಇದ್ ಪಿತ್ರಾರ್ಜಿತ ಹಣೆಬರ. ಕೂಸು ಹುಟ್ಟಿದ ದಿನಂದ ಈ ಘಳಿಗೆವರೆಗೆ ಮಾಡ್ದ ಸ್ವಂತ ಪಾಪ ಪುಣ್ಯಗ ಸ್ವಯಾರ್ಜಿತ ಹಣೆಬರ. ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಗ ಮಿಶ್ರ ಆಗಿ ಹೊಸ ಹಣೆಬರ (ಯೋಗ) ಆದೆ. ಅಪ್ಪಿನ ಹೊಸ ಹಣೆಬರಲಿ ಕಂಡಕ್ಟರ್ ಆಗುವ ಸಂಗತಿ ಮಾತ್ರ ಅಚ್ಚು ಆದೆ.

ಅಂವನ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಲಿ ಕಲೆಕ್ಟರ್ ಆಗುವ ಸಂಗತಿಯೇ ಇತ್ಲೆ.

ಅಪ್ಪಿನ ಯೋಗಲಿ ಕಂಡಕ್ಟರ್ ಬದ್ಲ್ ಕಲೆಕ್ಟರ್ ಆಗುವ ಸಂಗತಿನ ಬಿತ್ತಿಕೆ ಏನಾದರೂ ಉಪಾಯ ಇತ್ತಾಂತ ಮಣಿ ಅವ್ವನ ಕೇಳ್ದೆ. ಯಾವ ಕೆಲ್ಸ ಮೇಲೂ ಅಲ್ಲ ಕೀಳೂ ಅಲ್ಲ, ಹೆಂಗೂ ಕನ್ಸು ಕಂಡವೆ, ಸಲ್ಪ ದೊಡ್ಡ ಕನ್ಸು ಕಂಡರೆ ಒಳ್ಳೆದ್ ತಾನೆ?

ಅವ್ವ ಹೇಳ್ದೆ – ನಾವು ಸಂಬಾರ ಹೊಡಿ ಮಾಡ್ಸಿಕೆ ಮಿಲ್‌ಗೆ ಹೋದವೆ. ಅಲ್ಲಿ ಬೇರೆ ಯಾರೋ ಮೆಣ್ಸ್‌ನ ಹೊಡಿ ಮಾಡ್ಸಿದ್ದವೆ. ಸಂಬಾರನ ಮಿಷಿನ್ ಒಳಗೆ ಹಾಕಿಕನ ಮಿಷಿನ್‌ಲಿ ಸಿಕ್ಕಿ ಹಾಕಂಡಿರ್‌ವ ಮೆಣ್ಸ್ ಹೊಡಿ ಸಂಬಾರ ಹೊಡಿ ಒಟ್ಟಿಗೆ ಮಿಶ್ರ ಆಗಿ ಬಂದದೆ. ಮೆಣ್ಸ್ ಹೊಡಿ ಮಿಶ್ರ ಆಗದಂಗೆ ಮಾಡಿಕೆ ಸಂಬಾರ ಹಾಕಿಕೆ ಮುಂದೆ ಸಲ್ಪ ಬೇಳೆನ ಹಾಕಿ ಬಾಕಿ ಇರ್‍ವ ಮೆಣ್ಸ್‌ಹೊಡಿನ ಕಾಲಿ ಮಾಡುವೆ. ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೇಬರಗ ಈ ಮೆಣ್ಸ್‌ಹೊಡಿ ಇದ್ದಂಗೆ. ಅಪ್ಪಿ ಕಂಡಕ್ಟರ್ ಆಟ ಆಡುವ ವಯಸ್‌ಲಿ ಬೇಳೆ ಹಾಕಿ ಮೆಣ್ಸ್‌ಹೊಡಿನ ಕಾಲಿ ಮಾಡಕಾಗಿತ್. ಅಂದರೆ ಅವನ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೇಬರಗಳ್‌ನ ಉಜ್ಜಿ ತೆಗ್ದಿದ್ದರೆ ಹೊಸ ಹಣೆಬರ ಕಾಲಿ ಇರ್ತಾ ಇತ್ತ್ . ಮತ್ತೆ ಕಲೆಕ್ಟರ್ ಆಗುವ ಸಂಗತಿನ ಹೊಸ ಹಣೆಬರಲಿ ಬಿತ್ತಕ್ಕಾಗಿತ್.

ಮನ್ಸನ ಬಾಳ್‌ಲಿ ಈ ಮೆಣ್ಸ್‌ಹೊಡಿ ತರ ಇರ್‍ವ ಪಿತ್ರಾರ್ಜಿತ ಮತ್ತೆ ಸ್ವಯಾರ್ಜಿತ ಹಣೆಬರಗಳ್‌ನ ಪೂಜಿ ತೆಗ್ದ್ ಹೊಸ ಹಣೆಬರನ ಬರಿಯುವ ಸಂಗತಿ ಭಗವತ್ಗೀತೆಲಿ ಉಟ್ಟು, ಶ್ರೀಕೃಷ್ಣ ಪರಮಾತ್ಮ ಆರನೇ ಅಧ್ಯಾಯ "ಆತ್ಮ ಸಂಯಮ ಯೋಗ" ಮತ್ತೆ ಹದ್ನೇಳನೇ ಅಧ್ಯಾಯ "ಶ್ರಧ್ಧಾತ್ರಯ ವಿಭಾಗ ಯೋಗ" ಲಿ ಈ ಸಂಗತಿಗಳ್ನ ಅರ್ಜುನಂಗೆ ವಿವರವಾಗಿ ಹೇಳಿಟ್ಟು.

ಒಂದ್ ಗಾದೆ ಮಾತುಟ್ಟು "ಸಾವಿರ ಟನ್ ಉಪದೇಶಕ್ಕಿಂತ ಒಂದ್ ಗ್ರಾಮ್ ಅನುಷ್ಠಾನ ಲೇಸು". ಗೀತೆನ ಶ್ರದ್ಧೆಂದ ಓದಿ ಅಲ್ಲಿ ಬರ್‍ದ ಸಂಗತಿಗಳ್‌ನ ತಿಳ್ಕಣಕ್ಕು, ಅಭ್ಯಾಸ ಮಾಡುವ ಕ್ರಮನ ಲಾಯಿಕ್ಕಾಗಿ ಅರ್ಥಮಾಡಿಕಣಕ್ಕು. ಅಭ್ಯಾಸನ ಸುರು ಮಾಡಿ ಪುಸ್ತಕಲಿ ಹೇಳ್ದ್ ನಿಜನಾಂತ ಗ್ಯಾರಂಟಿ ಮಾಡಿಕಣಕ್ಕು. ಒಮ್ಮೆ ಗ್ಯಾರಂಟಿ ಆದಮೇಲೆ ಅಭ್ಯಾಸನ ಮುಂದುವರ್ಸಿ ಮನ್ಸ್‌ನ ಪರಿವರ್ತನೆ ಮಾಡಿಕಂಡ್ ಕಾರ್ಯಸಿದ್ಧಿ ಮಾಡಿಕಣಕ್ಕು...........

ಅವ್ವ ಹೇಳಿಕಂಡ್ ಇರ್‍ಕನ ಮಣಿದ್ ಮೊಬೈಲ್ ರಿಂಗ್ ಆದೆ. ಮಣಿ ಮೊಬೈಲ್‌ಲಿ ಮಾತಾಡಿಕಂಡ್ ಕೈ ಸನ್ನೆ ಮಾಡಿಕಂಡ್ ಉಬ್ಬುಲು ಹಾಕಿಕೆ ಹೋದೆ. ಮುತ್ತು ಕೈಲಿ ದುಡ್ಡು ಕೊಟ್ಟ ಅವ್ವ ಸೊಸೆ ಬಯ್ಯದು ಬೇಗ ಕೋಳಿ ಹಿಡ್ದ್ ಕೊಡೂಂತ ಹೇಳ್ದೆ. ಮುತ್ತು ದುಡ್‌ನ ಸಂದೂಕಲಿ ಮಡ್ಗಿ ಬಂದವ್ನು ಕ್ಕೊ, ಕ್ಕೊ, ಕ್ಕೋ ತ ಕರ್‍ಕಂಡ್ ಲಾಕಿನ ಹಿಡಿಯಕೆ ಹೋದೆ.

* * * * *

# ಇನಾಮು

ಶ್ರೀಮತಿ ಶೀಲಾ ಸೀತಾರಾಂ, ಸುಳ್ಯ

ನಿಶಾಂಗೆ ಅಂದು "ಥೈಥೈ"ಂತಾ ಕುನಿಯೊಷ್ಟು ಕುಸಿ. ಅದ್ಕೆ ಬಿ.ಇ. ಓದು ಮುಗ್ದ ಕೂಡ್ಲೆನೇ ಬೆಂಗಳೂರಿನ ಒಂದು ಒಳ್ಳೆ ಕಂಪೇನಿಲಿ ಕೆಲ್ಸ ಸಿಕ್ಕಿಟು. ಇಷ್ಟು ಬೇಗ ಅದು ಸಂಪಾದ್ನೆ ಮಾಡ್ದೇಂತ ಕನಸಿಲಿನೂ ನೆನ್ಸೆತ್ತಿಲ್ಲೇ. ಅದರ ಪುಣ್ಯನೋ, ಅಲ್ಲಾ ಅದರ ಅಜ್ಜಿ ಪುಣ್ಯನೋ, ಹೆಂಗೋ ಬಂಜಂದ ಓದಿದಕ್ಕೊ ಎಂತದ್ದೊ ಕೆಲ್ಸ ಮಾತ್ರ ಸಿಕ್ಕಿಟು. ಅಪ್ಪಾ, ಅವ್ವ, ತಮ್ಮನ ಮತ್ತೇ ಪ್ರೀತಿನ ಉಗ್ಗವ್ವನ (ಅಪ್ಪನ ಅವ್ವ) ಬುಟ್ಟು ಹೋಕಲೇಂತಾ ಒಂದು ಕಡೇಂದಾ ಬೇಜಾರೂನೂ ಏನೂ ಮಾಡ್ದೂ ಹೋಕೆ ಹೋಕಲ್ಲಾ. ಈಗನ ಕಾಲಲಿ ಗೂಡೆಗಳಿಗೆ ಸ್ಕೂಟರ್, ಕಾರ್ ಬುಡಿಕೆ, ಗೊತ್ತಿಲ್ಲದಿದ್ದರೆ, ಏನಾರೊಂದು ಒಳ್ಳೆ ಕೆಲ್ಸ ಇಲ್ಲದಿದ್ದರೆ, ಅವರ ಸ್ವಲ್ಪ ಜನಂಗ ಕಡೇಕಣ್ಣಿಂದ ನೋಡ್ವೆ, ಕಾಲಂತ್ಥೇಳವ ಹೇಂಗೆ ಕುಣಿಸಿದೇ ಹಾಂಗೆ ಕುಣಿಯೊಕಲೆ.

ನಿಶಾನ ಅಪ್ಪ ಶಾಲೆಲಿ ಮಾಸ್ಟ್ರ. ಅವ್ವ ಮನೆ ಉಸ್ತುವಾರಿ ಮಂತ್ರಿ. ಖರ್ಚಿಗಾಗುವಷ್ಟು ಆದಾಯ ಬರುವ ಅಡಿಕೆ ತೋಟ, ರಬ್ಬರ್ ತೋಟ, ಇನ್ನೂ ಅದೂ ಇದೂಂತ ಉಟ್ಟಲ್ಲ ಕಾಡ್ ಉತ್ಪತ್ತಿಗ. ಒಂದು ಚಂದದ ಮನೆ, ಮನೆ ಮುಂದೆ ಹೂತೋಟ, ಹಟ್ಟಿ, ಹಸು, ಕರು, ನಾಯಿ, ಕೊತ್ತಿ, ಹೀಂಗೆ ಮಾಮೂಲಿ ಕೃಷಿಕರ ಮನೆ. ಇದರೆಲ್ಲಾ ಗಮನಲಿ ಇಸಿ ಲ್ಯಾಕಲಿ ನೋಡಿಕಣುವ ಕೆಲ್ಸ ಅವ್ವಂದು. ತಮ್ಮ ಆಕಾಶ ಪಿ.ಯು.ಸಿ ಓದಿಕ್ಕಂಡು ಉಟ್ಟು, ಅಕ್ಕಾ ಅಂದರೆ ಏನೋ ಪ್ರೀತಿ. "ಚಿನ್ನಮ್ಮಜ್ಜಿ" ನಿಶಾನ ಭಾರಿ ಕೊಂಡಾಟಲಿ ಸಾಂಕಿದಕ್ಕೆನೋ ಏನೋ ಅಜ್ಜಿಗೊಂದು ಬಾಲ ಅಂದರೆ ನಿಶಾನೇ. ಅಡಿಗೆ ಕೋಣೆ ಪಟ್ಟ ಉಗ್ಗವ್ವಂಗೆ ಯಾಕೆಂತ್ಥೇಳಿರೆ ಅದ್ ತುಂಬಾ ಗಟ್ಟಿಮುಟ್ಟ್ ಇದ್ದರಿಂದ ಒಲೆಬುಡನ ಇನ್ನೂ ಸೊಸೆಗೆ ಬುಟ್ಟುಕೊಟ್ಟತ್ತಿಲ್ಲೆ. ಉಗ್ಗವ್ವಗೊಂದು ಪಾಸಡಿ ಹೆಂಗ್ಸು ಕೆಲಸಕ್ಕೆ. ಅವ್ರ ಕುಟುಂಬದವೇ ಗಡ ಅವುಕೆ ಯಾರಿಲ್ಲೆಗಡ. ಹಾಂಗಾಗಿ ಇವರ ಮನೇಲೀ ಇರುದು. ಎಲ್ಲಾ ಕಷ್ಟ ಸುಖನೂ ಇವೇ ನೋಡಿಕಣಕು. ಹಿಂಗೆಲ್ಲಾ ನಿಶಾನ ಮನೆಕಥೆ.

ನಿಶಾನ ಉಗ್ಗವ್ವಂಗೆ "ನಿಶಾ"ಂತ ಪಿಳ್ಳಿಗೆ ಹೆಸರಿಸ್ಸುದು ಒಂದು ಹನಿಸಿನೂ ಮನಸಿತ್ಲೇ. ಆ ಕೂಸಿಗೆ ಆ ಹೆಸ್ರು ಇಸ್ಸ್‌ಬೋಡಿಯಾ "ನಿಶಾ ನಿಶಾಂತ" ಕರೆದರೆ ಶನಿ, ಶನಿ'ಂತಾ ಕರೆದ್ಹಾಂಗೆ ಆದೆ. ನಾಗವೇಣಿನೋ, ನಳಿನಿನೋಂತ ಹೆಸ್ರು ಇಸ್ಸಿಯಾಂತ ಹೇಳಿರೆ ನನ್ನ ಮಾತುನಾ ಯಾರೂ ಕೇಳುವೆ ಎಲ್ಲಾ 'ಪೇಶನ್' ನಾ ಮಾತ್ರ "ಅಕ್ಕೂ"ಂತಾನೇ ಕರ್‍ಯೋದು. ಪಿಳ್ಳಿಗೂ ಕುಸಿನೇ ಹಾಂಗೆ ಕರ್‍ಯೋದು. ಅದಂತೂ ನನ್ನ "ಚಿನ್ನೂ ಉಗ್ಗವ್ವಾ" ಅಂತ ಸೆಲೇಲೆ ಮಾತಾಡ್ಸುದು.

ಈಗ ನಿಶಾ ಬೆಂಗ್ಳೂರಿಗೆ ಹೋಕಾದ್ದರಿಂದ ಅದಕ್ಕೀಗ ಸುಮಾರು ಬಟ್ಟೆ, ಬರೆ, ಅದೂ ಇದೂಂತ ತಾಕೆ ಅಪ್ಪನೊಟ್ಟಿಗೆ ಅವರ ಊರಿನ ಪೇಟೆಗೆ ಹೋಗಿ ಮುಖ್ಯ ಮುಖ್ಯದರೆಲ್ಲಾ ತಕ್ಕೊಂಡು ಬಂದೂ ಆತು. ಸ್ವಲ್ಪ ಸ್ವಲ್ಪಂತಾ ಹೇಳೂರು "ಮಾರಾಪು" ಸುಮಾರ್ ಆತ್. ಇತ್ತ ಅದರ ಉಗ್ಗವ್ವಂಗೂ, ಅವ್ವಂಗೂ ಮಗಳಿಗೆ ಕಟ್ಟಿ

ಕೊಡಿಕೆ ತಿಂಬಕೆ ಮಾಡಿಕೊಂಡು ಇದ್ದರೂನೂ, ಮನ್ಸಿಲೀ ಬೇರೇನೇ ಗ್ಯಾನ. ಆ ದೊಡ್ಡ ಪೇಟೇಲಿ ಹೇಂಗೇ ಇದ್ದದೆನೊ, ಈ ಪೇಪರ್, ಟಿ.ವಿ.ಲಿ ನೋಡಿ ನೋಡಿ ಒಂದು ಮೂಲೆಂದ ಚಳಿಕುದ್ದುಟು. ಬೇಡಾ ಬೇಡಾಂತೇಳೂರು ಇಲ್ಲದ ಸಲ್ಲದ ಕೆಟ್ಟ ಯೋಚನೆನೇ ಬಾದ್. ಆದರೆ ತೋರ್ಸಿಕಣಿಕೆ ಆದ್ಲೆ ಅಲ್ಲಾ. ಮನ್ಸಿಲೇ ಧೈರ್ಯ ತಂದ್‌ಕ್ಕಂಡ್, ಮಗಳಿಗೆ ಗೋಟುಕ್ಯಾದು ಚಟ್ನಿಹುಡಿ, ಉಪ್ಪಿನಕ್ಯಾ, ತುಪ್ಪ, ಸಂಡಿಗೆ, ಹಪ್ಪಳ, ಸ್ವಲ್ಪಕಾಯಿ, ವಡೆ, ಸುಕುರುಂಡೆ, ಕ್ಯೊಸಲಕ್ಕಿ ಹುರ್ದು ಹುಡಿಮಾಡಿ ಅವಲಕ್ಕಿ ಸೇರ್ಸಿ ಇಸ್ಸಿ, ಬೆಲ್ಲದ ಪಾಕಕ್ಕೆ ಕಾಯಿ ತುಪ್ಪ ಹಾಕಿ ತಣ್ಣಗಾದ ಮೇಲೆ ಎಲ್ಲಾ ಸೇರ್ಸಿ ಕಲ್ಸಿ ಡಬ್ಬಿಗೆ ಹಾಕಿದ "ನನ್ನರಿ" ಹೀಂಗೆ ಒಂದೋ ಎರಡೋ, ಉಗ್ಗವ್ವ ಪಿಳ್ಳಿನ ಕರ್ದು "ಅಕ್ಕೊ, ನೋಡ್‌ಮಗ್ಳೂ ಹೊಟ್ಟೆ ಇಸ್ಸಿರೇ ನಾವು ಕಟ್ಟಿಕೊಟ್ಟದರ ತಿನೋಕ್‌ಬಲಾ. ಮರ್ತು ಬುಡ್ಬೋಡಾ ಗೊತ್ತಾತಾ'ಂತ ಹೇಳಿ ನಿಶಾನ ತಲೆನ ಪೂಜಿತು. "ಅಯ್ಯೊ ಚಿನ್ನೂ ಉಗ್ಗವ್ವ, ಅದರ ಚಿಂತೆನೇ ಮಾಡ್ಬೋಡಾ. ಚೋದ್ಯ ಮಾಡಿಕ್ಕೊಂಡು ಕುದ್ರುದು ಬೇಡಾ"ಂತ ಹೇಳಿ ಕಿವಿಹಕ್ಕಲೆ ಬಂದು ನಾ "ತಿನ್‌ಪಾಂಡಿಂತ" ಗೊತ್ತಿಲ್ಲೆನಾ ನಿಂಗೆ. ಆಗ ಉಗ್ಗವ್ವಾ "ಹೌದೌದು, ಅಲ್ಲಿ ಹೋದ ಮೇಲೆ ನನ್ನ ಕೂಸಿಗೆ ತಿಂಬಕಾರು ಪುರುಸೊತ್ತು ಉಟ್ಬೊ ಇಲ್ಲೆನೋ" ಅಂತಾ ಕುಸು ಕುಸು ದುಃಖಿಕನಾ, ನಿಶಾ ಉಗ್ಗವ್ವನ ಹೆಗಲ್‌ಮೇಲೆ ಕೈಹಾಕಿ ಮಂಜಣೆಲಿ, ಸೇಲೆಂದ "ನೀ ಮರ್ಸ್‌ಕಂಡ್ ನನ್ನ ಕಳ್ಸ್‌ಬೋಡಾ, ಕುಸಿಂದ ಕಳ್ಸ್ "ನನ್ನ ಚಿನ್ನೂ ಉಗ್ಗವ್ವಾ"ಂತ ಒಂದು "ಪುತ್ತಾ" ಕೊಟ್ಟೇ ಬುಟ್ಟಿತ್. ಉಗ್ಗವ್ವ ಹನ್ನಿಬಿದ್ದು "ಕಂಡ್ರಕುಟ್ಟಿ" ಈ ಗೂಡೆಗೆ ನಾಣ, ನಾಚಿಕೆ, ಲೆಜ್ಜಿ, ಪೊಲ್ಲು ಒಂದೂ ಇಲ್ಲೆಯಾಂತ" ಹೇಳಿ ನಿಶಾನ ತಲೆಗೊಂದ್ ಹೇಂಟಿತ್. ಅಷ್ಪೊತ್ತಿಗ ನಿಶಾ "ಅವ್ವಾ, ಉಗ್ಗವ ನಂಗೆ "ಕಂಡರಕುಟ್ಟಿಂತಾ" ಹೇಳುವೆಂತಾ ಹೇಳಿ ಅಪ್ಪನ ಮೋರೆನ ನೋಡ್ತು. ಆಗ ಅಪ್ಪಾ "ಅದು ಕೊಂಡಾಟಕ್ಕೆ ಹೇಳ್ದು ಮಗ್ಳು ಅದಕ್ಕೀಗ "ಹೊಟ್ಟೇಲಿ ಕೆಸ ಕೊಯ್ದಾಂಗೆ" ಸಂಕಟ. ನಿನ್ನ ಬುಟ್ಟು ಇರೋಕಲೆಂತಾ. ಅದರ ಬಾಸೆ ಅದ್" ಅಷ್ಪೊತ್ತಿಗೆ, ಪಿಳ್ಳಿ ಆಕಾಶ ಬಂದು "ಉಗ್ಗವ್ವ, ನಾ ಏನೂ ನಿಂಗೆ ಮನುಸ್ಯನಾಂಗೆ ಕಾಂಬೊದಿಲ್ಲೆನಾ ಹೇಂಗೆ? ನಾ ಇಲ್ಲೆನೇ ಇಲ್ಲಿಂತಾ "ಹಕ್ಕಲೆ ಬಂದ್ ನಿಂತತ್. "ಒಳಾ ಮಂಜ ಒಳಾ ಆದರೂನೂ ನೀವಿಬ್ಬರೂನು ನಂಗೆ ಹಕ್ಕಲೆ ಇದ್ದು ಇದ್ದು ಈಗಾ...... ಹೇಳಿ ಸುಮ್ಮನಾತು. ಅತ್ತ ಅವ್ವನ ಕಣ್ಣಲೀ ನೀರ್ ನೋಡಿ ಆಕಾಶ "ಅವ್ವಾ ನೀ ಈಗ ಹೀಂಗೆ ಮರ್ಪರೇ ಹೆಂಗೇ, ನಾಳ್ದ್ ಅಕ್ಕಾಂಗೆ ಮದ್ವೆ ಆಗಿ ಹೋಕಾನ ಉಟ್ಟಲೇ ಮರ್ಡಿಕೇ"ಂತಾ ಹೇಳಿ ಅವ್ವನ ಕಣ್ಣೀರಿನ ಅವ್ವನ ಸೆರಗಿಂದಲೇ ಒರೆಸಿತು. ಆಗ ಅವ್ವನ ಮೋರೆಲಿ ಮಂಜನ ಮಾತ್‌ನ ಕೇಳಿ ಹೂ ಅರಳಿಕ್ಕಂಡ್ ಬಂದ್ದಾಂಗೆ ಮೋರೆ ಅರಳಿತು. (ಕುಶಿಗೆ ಮಗಳ ಮದ್ವೆನ ನೆನ್ಸಿ) ಅವರಿಗೊಂದು ಸಣ್ಣ ಪೆಟ್ಟುಕೊಟ್ಟು "ನಿಂಗೆ ಯಾಗೋಳು ತಮಾಸೆನೆ, ಕಷ್ಟ, ಸುಖ ಏನೂಂತ ಗೊತ್ತಿದ್ದರಲ್ಲಾ. ಅದು ಹೆಣ್ಣು ಗೂಡೆ ಹೆಣ್ಮಕ್ಕಳ ಕಷ್ಟ ಹೆಮ್ಮಕ್ಕಳಿಗೆ ಗೊತ್ತಿರುದ್.

ಹೆಣ್ಣಿನ ಮಾತು ಕೇಳಿ ಬಂದ ವಾಸುದೇವ ಮಾಸ್ತ್ರು "ನೀ ಏನ್ ಹೆಣ್ಣ್ ಕೂಸೂಂತ ಸಸಾರ ಮಾಡುದು. ಅದರ ನಾ ಗಂಡು ಮಂಜನಾಂಗೆ ಸಾಂಕ್ಯೊಳೆ. ಅದ್ ಎಷ್ಟು ಧೈರ್ಯಲಿ ಹೊರಟ್ ನಿತ್ತಾಟ್ (ಮಗಳ ಕೈ ಹಿಡ್ಕಂಡ್ ಹೆದ್ರ್ ಬೋಡಾ ನಾ ಒಳೆ ಧೈರ್ಯಲಿ ಇರೂಂತ ಹೇಳುವ ಹಾಂಗೆ) ನೋಡ್ ಮಗ್ಳೂ ಮಗಳ

ನೋಡಿರೆ ಅದೂ ಏನೋ ಯೋಚನೆ ಮಾಡಿಕ್ಕಂಡ್, ಅಲ್ಲಾ ಹಕ್ಕಲೇ ಇದ್ದರೆ "ಹೂಸೂಂದ ಕಡೆ" ಸಸಾರ ಈಗ ನನ್ನ ಎಷ್ಟು ಇವೆಲ್ಲಾ ಪ್ರೀತಿಸುವೆ"ಂತಾ ನಿಲ್ಲಿಕೂ ಆಗದೆ ಕುದ್ರಿಕೂ ಆಗದೆ "ಏಮೆ ಉಳ್ಳಿಗೆ ಕಿಚ್ಚ್ ಕೊಟ್ಟಾಹಾಂಗೆ" ಅತ್ತಿತ್ತ ಹೋಗುದರ ನೋಡಿ ಮಾಸ್ಟು "ನಿಶಾ ಒಂದು ಗಿಡನ ತಂದ್ ನೆಡಿಕನ ಅದ್ ಬಾಡ್‌ದುಲ್ಲೆನಾ, ಅದ್ಕೆ ಲ್ಯಾಕ್ ನೀರು, ಗಾಳಿ, ಬೊಳ್ಪು ಬಿದ್ದರೆ ಎಲ್ಲಾ ಸರಿಯಾಗಿ ಪೊರ್ಲಿಲಿ ಚಿಗ್ರಿದೆ ಹೌದೋ ಅಲ್ಲನೋ ಹಾಂಗೆನೇ ನಾವು ಮನುಷ್ಯರೂನೂ. ಅಲ್ಲಿ ಹೋಗಿ ಹೊಂದಿಕ್ಕಂಡ್ ಹೋದರೆ ಎಲ್ಲಾ ಸರಿಯಾದೆ ಅದರಲ್ಲೆನ್ ಚೋದ್ಯ ಇಲ್ಲೆ ಬುಡು"ಂತಾ ಹೇಳಿ ಸಮಾಧಾನ ಮಾಡಿದೊ.

ನಿಶಾ ತಂದ ಬಟ್ಟೆಗಳ ಸರಿಯಾಗಿ ಜೋಡಿಸಿಕೆ ಆಗದೆ ಪೇಚಾಡ್‌ತ್ತಿತ್. ಅಪ್ಪ ಹಕ್ಕಲೆ ಬಂದ್ "ಹಂಗೆ ತುಂಬಿಸಿರೆ ಹೇಂಗೆ ದೊಡ್ಡ ದೊಡ್ಡದರ ಲ್ಯಾಕ್ ಮಡ್ಜಿ ಇಸ್ಸ್. ಸಣ್ಣ ಸಣ್ಣದರ ಮೂಲೆ ಮೂಲೆಗೆ ಸೇರ್ಸು. ಆಮೇಲೆ ಅಮುರಿಸಿ ಮುಚ್ಚಳ ಹಾಕಿರೆ ಆತಪ್ಪಾ" ಹೇಳಿಕಂಡೇ ಅವೇ ಎಲ್ಲಾ ಲ್ಯಾಕಲಿ ಜೋಡಿಸಿದೊ.

ಕತ್ತಲೆನಾ ಬಸ್ಸಿಗೆ ಅಪ್ಪ ಮಗಳು ಹೊರಡುದು. ಕತ್ತಲೆಗೆ ಎಲ್ಲವೂ ಒಟ್ಟಿಗೆ ಕುದ್ದು ಉಂಡರೂನೂ ಒಬ್ಬರುದು ಸುದ್ದಿ ಸುರಾಕ್ ಇಲ್ಲೇ. ಮಾತಾಡಿಕೆ ಏನೋ ತುಂಬಾ ಉಟ್ಟ್, ಆದ್ರೆ ಮಾತಾಡಿಕೆ ದೊಂಡೆ ಒಣಗಿದ ಹಂಗೇ, ಹೇಂಗೋ ಉಂಡ ಶಾಸ್ತ್ರ ಮಾಡಿದೊ. ದೇವ್ರಿಗೂ, ಗುರು ಹಿರಿಯರಿಗೂ ಅಡ್ಡಬಿದ್ದು ಕೈಮುಗ್ದು ಆದ ಮೇಲೆ ನಿಶಾ ತಮ್ಮನ ಹಕ್ಕಲೆ ಬಂದ್, "ಏನು ಮಂಕ್ ತಮ್ಮಣ್ಣ, ಮಂಕು ಬಡ್ದಾಂಗೆ ಒಳೊ, ಮಾತಾಡ್‌ದುಲ್ಲೆನಾ, ಬೇಜಾರಾದೆನೆ, ಹೋಗ್ಲಿ ನಿಂಗೆ ನನ್ನ ಸುರುನ ಸಂಬ್ಳಲಿ ಏನೂ ತಕ್ಕಂಡು ಬರೋಕು ಹೇಳ್‌ಗಡ "ಆಗ ತಮ್ಮ ಆಕಾಶ "ಅಕ್ಕಾ ನಾ, ಏನ್ ಪಿರ್ಕಿಸಾ ಸುಮ್ನೆ ಸುಮ್ನೆ ಮಾತಾಡಿಕೆ. ನೀ ಸೌಖ್ಯಲಿ, ಲ್ಯಾಕಲಿ ಅಪ್ಪ, ಅವ್ವಂಗೆ ಬೇಜಾರ್ ಮಾಡಾದ್ದಾಂಗೆ ಇದ್ದರೆ ಅಷ್ಟೇ ಸಾಕ್ ನಂಗೆ ಅದೇ ದೊಡ್ಡ ನಿನ್ನ "ಇನಾಮು" ಗೊತ್ತಾತಾ? ಅರ್ಥ ಆತಾ?ಂತ ಹೇಳಿ ಅಕ್ಕನ ಮೋರೆನ ಏನು ಹೇಳಿಯಾಂತ ಹೇಳುವ್ವಾಂಗೆ ನೋಡ್ತು. ತಮ್ಮನ ಮಾತ್ ಕೇಳಿ ನಿಶಾ "ಅರೆರೆ, ನನ್ನ ತಮ್ಮಾ ನಿನ್ನೆಂದ ಇಂದಿಗೆ ಎಷ್ಟು ದೊಡ್ಡಂವ ಆವುಟ್ಯಾ. ಏನೋ ದೊಡ್ಡೋವು ಮಾತಾಡುವಂಗೆ ಮಾತಾಡಿಯ 'ಆಶ್ಚರ್ಯಲಿ ನೋಡಿತು "ಹೌದು ಮತ್ತೇ ಇನ್ನು ಮೇಲೆ ನಾನೇ ದೊಡ್ಡವ ನೋಡು, ಮನೆಯವರೆಲ್ಲಾ ಬೇಜಾರ್ ಮಾಡಾದ್ದಾಂಗೆ ನೋಡೋಕು. ನೀ ಏನೋ ಈಗ ಪುರ್ರಾಂತ ಹಾರಿ ಹೋದಿಯಾ. ಆ ಮೇಲೆ ಗಂಡನ ಮನೆಗೆ ಮದ್ವೆ ಆಗಿ ಹೋದಿಯಾ. ಆಗ ನಾ ಬೇಜಾರ್ ಮಾಡಿಕ್ಕಂಡು ಕುದ್ದರೆ ಅಷ್ಟೇ" ಹಿಂಗೆ ಹೇಳಿ ತಲೆ ಅಲ್ಲಾಡಿಸಿತ್ ಆಕಾಶ. ನಿಶಾ ತಮ್ಮನ ಬಲಕೈನ ಹಿಡ್ದು ಅಲ್ಲಾಡಿಸಿಕಂಡ್ "ಏ, ಮಂಕುತಿಮ್ಮಾ, ನಿನ್ನ ಕೊಂಕು ಮಾತು ಬುಟ್ಟು ನಿನ್ನ ತೂಕದ ಮಾತ್‌ನ ಕೇಳಿ ನನ್ನ ಮನ್ಸೀಗಾ ಹಗುರಾತ್. ನನ್ನ ಕೈರೋಮ ಹೇಂಗೆ ನೆಟ್ಟಂಗಾತ್ ನೋಡೂಂತ ಹೇಳಿ ಕೈನ ತೋರಿಸ್ತು. "ನೀ ಒಂದು'ಂತ ಹೇಳಿ ತಮ್ಮ ನೆಗಾಡ್ತು, ಅಜ್ಜಿ ಅವ್ವನ ಮನೆಲಿದ್ದವರೆಲ್ಲಾ ತಮಾಷೆ ಮಾಡಿ ನೆಗಾಡ್ಸಿ ಎಲ್ಲವೂಕೆ ಕೈ ಬೀಸಿ ಅಪ್ಪನೊಟ್ಟಿಗೆ ಬೆಂಗ್ಳೂರಿಗೆ ಹೋಕೆ ಬಸ್‌ಸ್ಟಾಂಡ್‌ಗೆ ಹೋತ್ ನಿಶಾ.

ಸಹನಾ ನಿಶಾನ ದೋಸ್ತಿ. ಅದಕ್ಕಿಂತ ಒಂದು ವರುಷ ದೊಡ್ಡದು. ಅದೂನೂ ಬಿ.ಇ ಮಾಡಿ ಒಂದು ವರುಷ ಮುಂದೆನೆ ಹೋಗಿ ಒಂದು ಸಾಫ್ಟ್‌ವೇರ್ ಕಂಪೆನಿಲಿ ಕೆಲ್ಸ ಮಾಡಿಕಂಡಿತ್ತು. ಅವು ಮೂರು ಜನ ಗೂಡೆಗ ಸೇರಿಕ್ಕಂಡು ಒಂದು ಸಣ್ಣ ಮನೆನ ಬಾಡಿಗೆಗೆ ತಕ್ಕೊಂಡು, ಅಡುಗೆ ಮಾಡಿಕ್ಕಂಡು ಕೆಲಸಕ್ಕೆ ಹೋಗುತ್ತಿದ್ದೊ. ಅದರಲ್ಲಿ ಒಂದು ಗೂಡೆ ಮದುವೆ ಆಗಿ ಹೋದೆ. ಹೆಂಗೂ ಆ ಜಾಗೆ ಖಾಲಿ ಆದೆಲೇ ನೀ ನಮ್ಮ ಮನೆಗೆ ಬಂದು ಬುಡು. ಪಿ.ಜಿ. ಗೀಜಿಂತಾ ಹುಡ್ಕುಬೋಡಾ. ನಾ ಎಲ್ಲಾ ಕಡಗಟ್ಟ್ ಮಾಡ್ನೆ ನೀ ಏನೂ ಚಿಂತೆ ಮಾಡ್ಬೋಡಾಂತ ಫೋನ್‌ಲೀ ಎಲ್ಲಾ ಹೇಳಿತ್ತು.

ನಿಶಾ ಮತ್ತು ಅದರ ಅಪ್ಪಾ ಬೆಂಗಳೂರಿಗೆ ಬೆಳಿಗ್ಗೆ ಬಂದು ಸೀದಾ ಬಿ.ಟಿ.ಎಂ. ಲೇ ಔಟ್‌ಲ್ಲಿರುವ ಸಹನನ ಮನೆಗೆ ಹೋದೊ. ಸಹನ ಪ್ರೀತಿಂದಲೇ ಅವರ ನೋಡಿಕ್ಕಂಡತು. ಸಹನ ದೂರಂದ ನೆಂಟತಿ ಆದ ಕಾರಣ ಅಪ್ಪ ಮಗಳಿಗೆ ಅಷ್ಟೊಂದು ತಲೆಬಿಸಿ ಆತ್ಲೆ. ಆ ರೂಂಲಿರುವ ಇನ್ನೊಂದು ಗೂಡೆ "ಬಿಂದೂ" ಅಂತ. ಅದು ವಾರಕ್ಕೊಮ್ಮೆ ಅದರ ಅಕ್ಕನ ಮನೆಗೆ ಕೆಂಗೇರಿಗೆ ಹೋದೆ. ಆದಿತ್ಯವಾರಂತೂ ಅವೇ ಇಬ್ಬರು. ಆದ ಕಾರಣ ಬೆಂಗ್ಳೂರಿಗೆ ಅಪ್ಪ ಬಂದರೂ ಉಳ್ಕಣಿಕೆ ತೊಂದರೆ ಇಲ್ಲೇಂತಾ ಯೋಚ್ನೆ ಮಾಡ್ತು ನಿಶಾ.

ಮಗಳ ಬುಟ್ಟು ಅಪ್ಪ ಹೊರಡಿಕನಾ "ಮಗ್ಳೆ ನಿನ್ನ ದೊಡ್ಡಮ್ಮನ ಮಗಳ ಫೋನು ನಂಬರ್ ಉಟ್ಟಲ್ಲ ಏನಾರೂ ತೊಂದರೆ ಗಿಂದರೆ ಆದರೆ'ಂತಾ ಹೇಳಿಕನ ಸಹನಾ ಹೇಳ್ತು "ಅಂಕಲ್, ಏನೂ ಹೆದರ್ಬೋಡಿ. ನೀವೂ ಹೋಗಿ ಬನ್ನಿ ಧೈರ್ಯಲಿರಿ"ಂತಾ ಹೇಳಿ ಕಳಿಸ್ತು ಮಾಸ್ಟ್ರು ನೆಮ್ಮದಿಂದ ಊರಿಗೆ ಹೊರಟೊ.

ಅಲ್ಲಿಂದ ಸುರು, ಕಂಪೆನಿಗೆ ಕೆಲ್ಸಕ್ಕೆ ಹೋದು. ಅಡಿಗೆ ಮಾಡ್ದು, ತಿನ್ನುದು, ತೊಳ್ಯೆದು ಪುರುಸೊತ್ತು ಆಕನ ದಿನಾಲೂ ಮನೆಯವರೊಟ್ಟಿಗೆ ಪಟ್ಟಾಂಗ ಹೀಂಗೆ ದಿನಾ ಕಳೀತಿತ್ತು.

ಒಂದು ದಿನಾ ಅಡ್ಗಿನ ನಿಶಾ ಮಾಡ್ತು. ಅದರ ಕೈರುಚಿ ನೋಡಿ ಮರ್ದಿನಾನೂ ನೀನೇ ಅಡ್ಗೆ ಮಾಡೂಂತ ಆತು. ಹೀಂಗೆ ಅಡ್ಗೆ ಕೆಲಸನ ನಿಶಾನ ತಲೆಗೆ ಕಟ್ಟಿದೊ. ಉಳಿದೆಲ್ಲಾ ಕೆಲ್ಸನ ಉಳಿದವಿಬ್ಬರೂ ಮಾಡುದರಿಂದ ನಿಶಾಂಗೆ ತಲೆ ಬೆಚ್ಚ ಆತ್ಲೆ. ಯಾಕೆಂತ ಹೇಳಿರೆ ಅದ್ಕೂ ಬಾಯಿ ಕಮ್ಮನೆ ಆಕು ಹಾಂಗೆ ಅದು "ಸೈ"ಂತಾ ಒಪ್ಪಿಕಣ್ತ್. ನಿಶಾ ಹಳ್ಳಿಲಿ ಇರಿಕನನೇ ಅದರ ಉಗ್ಗವ್ವನೊಟ್ಟಿಗೆ ಸೇರಿಕ್ಕಂಡು ಒಂದೊಂದೆ ಅಡ್ಗೆ ಕೆಲ್ಸ ಕಲ್ತಿತ್ತು. ಅದ್ಕೆ ಅಡ್ಗೆ ಮಾಡೂದೂಂತೇಳಿರೆ ಭಾರಿ ಕುಸಿನೇ. ಅದರ ಉಗ್ಗವ್ವ ಯಾಗೋಳು ಹೇಳೂದು "ಅಡ್ಗೆ ಮಾಡಾಕಾರೇ ಮುಂದೆ ಮನ್ಸು ಬೇಕಿಯಾ ಆ ಮೇಲೆ ತಾಳ್ಮೆ ಇರೋಕುಯಾ ಮತ್ತೆ ಬೇಕಾದ ಸಾಮಾನುಗಳ ಜೋಡಿಸಿಕಣಕು. ಅತ್ತ ದಡಬಡಾಂತ ಮಾಡಿ ಕಾಟಾಚಾರಕ್ಕೆ ಹಸಿ ಬಿಸಿ ಬೇಯ್ಸುದಲ್ಲಾ. ಅಡ್ಗೆ ಮಾಡಿಕ್ಕಂಡಿರಿಕನಾ "ಗಮಾ ಗಮಾ" ಅಂತ ಹೊರಗೆ ಇದ್ದವುಕೆ ಮೂಗಿಗೆ ಬಡ್ದು ಹೊಟ್ಟೆ ಇಸ್ಸದಂವುಂಗು ಹೊಟ್ಟೆ ಇಸ್ಸೊಕು. ಗೈಪು ಮಾಡಿಕನಾ ಗೈಪಿಲಿ ಉಪ್ಪು, ಖಾರ, ಹುಳಿನ, ಗಮನಲಿಸ್ಸಿಕಾ. ಗೈಪಿಗೆ ಅರ್ಪು ಹಾಕಿ ಕುದ್ದಾಂಗೆ ಇಳ್ಸದಲ್ಲಾ. ಅರ್ಪು ಕೊದ್ದು ಒರ್ಪು ಆಗಿ ಎಣ್ಣೆ ನಡಿಯಾಕನ ಇಳ್ಸೋಕು. ಆಗಾನೆ ರುಚಿಬಾದ್. ಕಾಯಿಸಿ ಹಾಕಿಕನ ಬೆಳ್ಳುಳ್ಳಿ ಕಂದ್‌ಕು,

ಸಾಸಿವೆ ಚಟಪಟ ಒಡಿಯೊಕು. ಆಮೇಲೆ ಅವರವರ ಕೈಗುಣ, ಕೈಪೊಲ್ಲು ಅದೆಲ್ಲಾ ದೇವ್ರು ಕೊಡೊಕು. ಹೀಂಗೆ ಹತ್ತಾರು ಸೂಕ್ಷ್ಮಗಳ ಹೇಳ್ತಿತ್ತು ನಿಶಾಂಗೆ.

ದಿನಂಗ ಹೋದ ಹಂಗೆ ಬೆಂಗ್ಳೂರಿನ ಅಡುಗೆಗ ತರ ತರದ ಭಾತ್‌ಗಳ (ಪುಲಾವ್, ಬಿಸಿ ಬೇಳೆ ಬಾತ್, ಪೊಂಗಾಲ್, ವಾಂಗಿಭಾತ್, ಪುಳಿಯೊಗರೆ, ಚಿತ್ರಾನ್ನ, ನಿಂಬೆ ಅನ್ನ, ಮಾವಿನ ಕ್ಯಾ ಅನ್ನ) ಹೀಂಗೆ ಎಲ್ಲಾ ಕಲ್ತೆ ಬುಟ್ಟತ್. ಅದರೊಟ್ಟಿಗೆ ಅದರ ಉಗ್ಗವ್ವ ಕಲಿಸಿಕೊಟ್ಟ ಪದಂಜಿ ಗಂಜಿ, ಕಾಯಿಗಂಜಿ, ಜೀರಿಗೆ ಗಂಜಿ, ಕೊತ್ತಂಬರಿ ಗಂಜಿ, ತೊಳಸಿದ ಹಿಟ್ಟು (ಮೆಂತ್ಯ ಹಿಟ್ಟು) ಹಿಂಗೆ ಕಾಲ ಕಾಲಕ್ಕೆ ಸರಿಯಾಗಿ ಯೋಚನೆ ಮಾಡಿಕ್ಕಂಡು ಮಾಡುತಿತ್ತು. ಅದರ ಪಾಕ ಶಾಲೆಂದ ಒಂದೊಂದೇ ಹೊರಗೆ ಬಂದ್ದಾಂಗೆ ಎಲ್ಲವೂ ಕುಸಿಂದ, ತಿಂದುಕ್ಕಂಡು ಉಂಡುಕ್ಕಂಡ್ ದಿನಾ ಕಳಿತಿದ್ದೊ.

ಒಂದು ದಿನ ಸಹನನ ದೊಡ್ಡಪ್ಪನ ಮಂಜ ಪ್ರಕಾರ ಸಹನಂಗೆ ಫೋನು ಮಾಡಿತ್. ಆಗ ಸಹನಾ "ಬೆಂಗಳೂರಿಗೆ ಬಂದರೆ ಬಾ ಮನೆಗೆ'ಂತಾ ಕರ್‌ದತ್ತ್. ಅಂವ ಹೈದರಾಬಾದ್‌ಲಿ ಸಾಫ್ಟ್‌ವೇರ್ ಕಂಪೆನಿಲಿ ಕೆಲ್ಸ್ ಮಾಡೂದು ಒಂದು ಆತ್ಯವಾರನ ಹೇಳಿ ಬನ್ನೆಂತಾ ಹೇಳ್ತು.

ಹಾಂಗೆ ಒಂದು ಆತ್ಯವಾರ ಅಂವ ಬಂದತು ಕೂಡಾ. ಇದು ಯಾಕೆ ಮನೆಗೆ ಕರ್‍ದೂಂತ? ಏನೋ ಅದರ ವಿಷಯ ಹೇಳಿಕೆ ಇರೊಕು ಏನಾಗಿರುದೂಂತ ಲೆಕ್ಕ ಹಾಕಿಕ್ಕಂಡೇ ಬಾತ್. ಬಂದ ಕೂಡ್ಲೆ "ಏನಿಯಾ ವಿಷಯ ಕಥೆ ಎಂಥಾ ನಿನ್ನದು"ಂತಾ ಕೇಳ್ತು. "ಅಂಥಾ ಹೆದ್ರುವಂತದ್ದೇನೂ ಆತ್ಲೆ ಮಾರಾಯ ಮುಂದೆ ನೀ ಕಾಫಿ ಕುಡಿಗಡ ಆಮೇಲೆ ಮಾತಾಡೊಮೊ. ಆಗ ಅಂವ "ನೀವೂನು ಬನ್ನಿ ಒಟ್ಟಿಗೆ ತಿನ್ನೊಮೊಂತ" ಹೇಳಿಕನ ಆಗ ಸಹನ "ಬೇಡಾ ಮುಂದೆ ನೀನೇ ತಿನ್ನು ಆಮೇಲೆ ನಾವು ತಿಂದವೆಂತಾ" ಹೇಳಿ ಮಾಡಿಸ್ಸಿದ ನೀರು ದೋಸೆ, ಬಾಳೆಹಣ್ಣು ರಸಾಯನ, ಕುಂಟೆಮೆಣ್ಸು ಹಾಕಿ ಬೆಳ್ಳುಳ್ಳಿ ಒಗ್ಗರಣೆ ಹಾಕಿದ ಕೆಂಪುಚಟ್ನಿನ ತಂದು ಇಸ್ಸಿದ ಕೂಡಲೇ ಪ್ರಕಾಶ "ವಾಹ್‌ಂತ ಹೇಳಿ ಲ್ಯಾಕ್ ಹೊಟ್ಟೆ ತುಂಬಾ ತಿಂದು ಬೆರಳುಗಳ ಚೀಪಿಕ್ಕಂಡ್, "ನೀವೀಗೆ ಉಟ್ಟೋ ಇಲ್ಲೋನ ಮಾರಾಯ್ತಿ. ನಾ ಅಂತೂ ನೀವು ಕೊಟ್ಟದರ ಲ್ಯಾಕ್ ತಿಂದೆ'ಂತಾ ಹೇಳಿ ಕೈ ತೊಳೆಯಕೆ ಹೋತ್. ಕೈ ತೊಳ್ಕು ಬಂದು "ನಂಗೆ ನನ್ನೊಬ್ಬ ದೋಸ್ತಿನ ಕಾಣಿಕೆ ಹೋಕೆ ಉಟ್ಟು, ಮಧ್ಯಾಹ್ನ ಊಟಕ್ಕೆ ಮಾತ್ರ ಇಲ್ಲಿಗೆನೆ ಬನ್ನೆ. ಬೇಜಾರ್ ಮಾಡ್ಬೋಡಾ. ನೀ ನನ್ನ ತಂಗೆ ಅಲ್ಲೆನಾ" ಅಂತಾ ಹೇಳಿ ಹೊರಟು ನಿಂತ್‌ಕ್ಕಂಡು, "ನೀ ಏನೋ ಮಾತಾಡಿಕೆ ಉಟ್ಟೂಂತ ಹೇಳಿದಲ್ಲಾ ಅದು ಬಂದ ಮೇಲೆ ನಿಧಾನಲಿ ಮಾತಾಡೋಮೊ ಅಡ್ಗೆ ಮಾತ್ರ ಮಾಸದೂಟ ಮಾಡೋಕು ಬಲಾಂತ" ಹೇಳಿ ಸಿಟಿಗೆ ಹೋತು.

ಸಹನಾ, ನಿಶಾ ಇಬ್ಬರೂ ಬೊಳ್ಪ್‌ನ ತಿಂಡಿ ತಿಂದ್ ಮಧ್ಯಾಹ್ನದ ಅಡುಗೆ ಎಲ್ಲಾ ಮಾಡಿಸ್ಸಿ ಆದು. ಪ್ರಕಾಶ ಬಾದ್ ಎಲ್ಲಾ ಸರಿ ಹೋತ್. ಸರಿ ಊಟಕ್ಕೆ ಆಗಲೂ ಪ್ರಕಾಶ ಒಟ್ಟಿಗೆ ಕುದ್ದು ಊಟ ಮಾಡೊಮೊಂತ ಹೇಳಿಕನ ಸಹನಾ ಅದು ಸರಿಯಾದುಲ್ಲೆಯಾ ನೀ ಊಟ ಮಾಡೂಂತ" ಅವಂಗೆ ಊಟ ಬಡಿಸಿಕೆ ಸುರು ಮಾಡ್ತು. ಸುರುಗೆ ಬಿರಿಯಾನಿ, ಕಾಯಿ ಕಡ್ದು ಹಾಕಿದ ಟೊಮೆಟೋ ಮೊಸ್ರು ಪಚ್ಚಿಡಿ, ಪೂರಿ, ಮಾಸದ ಸಾರು, ಅನ್ನ ರಸಂ, ಐಸ್‌ಕ್ರೀಂ ಹಾಕಿದ ಹಣ್ಣಿನ ಚೂರುಗ, ಎಲ್ಲಾ

ತಿಂದಾದ ಮೇಲೆ "ಎಂಥಾ ಮಾರಾಯ್ತಿ ಅಡ್ಗೆ ಕಲ್ತಳೆಂತಾ ನನ್ನ ಮೇಲೆ ಪ್ರಯೋಗ ಮಾಡಿದಾಂಗೆ ಉಟ್ಟು, ಏನು ಹೈದ ನೋಡಿ ಆವುಟಾ ಹೇಂಗೆ? ನಿಜಾ ಹೇಳೋಕು! ಅಡ್ಗೆ ಅಂತೂ "ಡಿಸ್ಟಿಂಕ್‌ಶನ್" ಲೆವೆಲಲಿ ಉಟ್ಟುಯಾ. ನಿನ್ನ ಕಟ್ಟಿಕೊಂಡವ ಪುಣ್ಯ ಮಾಡಿರೊಕು. ಹಿಂಗೆ ಒಂದೆ ಉಸಿರಿಲಿ ಮಾತಾಡಿಕೆ ಸುರು ಮಾಡ್ತು. ಸಹನಾ ಆಗ "ಸ್ವಲ್ಪ ಉಸಿರ್‌ತಕಾ ಮಾರಾಯ ಅಷ್ಟು ಅಂಬೆರ್ಪು ಮಾಡ್ಬೋಡಾ. ನೋಡು ನಿಂಗೆ ನನ್ನ ರೂಂಮೇಟ್‌ನ ಪರಿಚಯ ಮಾಡಿಕೊಡಿಕೆ ಆತ್ಲೆ ಇದರ ಹೆಸ್ರು ನಿಶಾಂತ ನಿಂಗೆ ಗೊತ್ತಿರ್‌ದ್, ನಾವುಗೆ ದೂರಲಿ ನೆಂಟ್ರು ಆಕು. ವಾಸುದೇವ ಮಾಸ್ಟ್ರುಂತಾ ಅದರ ಮಗ್ಳ್ ಇದ್, ನಾವ್‌ಗ್ ಅವು ಮಾಸ್ಟ್ರ್ ಆಗಿದ್ದೊ. ನೆನಪು ಮಾಡಿಕಾಂತ ಹೇಳ್ತು. "ಓ..ಹೋ.. ಹೌದಾಂತ ಹೇಳಿ ಈಗ ಸರಿಯಾಗಿ ಕಣ್ಣುಬುಟ್ಟ್ ಅಂವ ನಿಶಾನ ನೋಡ್ತು. ನೋಡಿ "ನೀವೂಗೂ ಹಿಂಗೆ ಅಡ್ಗೆ ಮಾಡಿಕೆ ಬಂದದೆನಾಂತಾ ಕೇಳಿದ್ದೆ ತಡ ಆ ಕೂಡ್ಲೆ ಸಹನಾ "ಬಂದದೇ ಅಲ್ಲಾ ಅದೇ ಮಾಡಿದ್ದು ಹೇಂಗೆಂತಾ" ಹುಬ್ಬು ಹಾರಿಸ್ತ್. ಅಷ್ಟೊತ್ತಿಗೆ ಪ್ರಕಾಶ ತಂಗೆನ ಕಿವಿ ಹಕ್ಕಲೇ ಬಂದು "ಅಡ್ಗೆ ಎ' ಗೂಡೆ ಫಸ್ಟ್‌ಕ್ಲಾಸ್ ನಂಗೇನೂ ಇಷ್ಟ ಆತ್. ಅದರೊಟ್ಟಿಗೆ ಒಮ್ಮೆ ಕೇಳಿ ನೋಡಿಯನಾ"ಂತ ಪಿಸ ಪಿಸಾಂತ ಹೇಳ್ತು, ಆಗ ಸಹನಾ ಬಾಯಿಮೇಲೆ ಬೆರಳಿಸಿ 'ಉಷ್'ಂತೇಳಿ ಅಡ್ಗೆ ಕೋಣೆಗೆ ಹೋತ್. ಇಂವ ಅಲ್ಲೆ ಮೇಜಿನ ಮೇಲೆ ಬೆರಳಿಂದ ಕುಟ್ಟಿಕಂಡ್ "ಇದಾ ಸಮಾಚಾರ"ಂತ ಅವನಷ್ಟಕ್ಕೆ ಮಾತಾಡಿಕ್ಕಂಡತ್ ಹಾಂಗೆ ಟಿ.ವಿ ನೋಡಿಕೆ ಹೋತ್.

ನಿಶಾ, ಸಹನಾ ಇಬ್ಬರೂ ಊಟ ಆದ ಮೇಲೆ ನಿಶಾನ ಕುದ್ರಿಸಿ ಸಹನಾ ಹೇಳಿಕೆ ಸುರು ಮಾಡ್ತು" ನೋಡು ನಿಶಾ ನಾ ಹೇಳುದರ ಸರಿಯಾಗಿ ಕೇಳೀಕಾ ಪ್ರಕಾಶ ಅಣ್ಣಂಗೆ ನೀ ಇಷ್ಟ ಆಗೋಳಾ ಅಪ್ಪ ಅವ್ವಂಗೆ ಅಂವ ಒಬ್ಬನೇ ಮಂಜ. ಹಿಂದೆ ಮುಂದೆ ಯಾರೂ ಇಲ್ಲೆ. ಅವನ ಅಜ್ಜ (ಅಮ್ಮನ ಅಪ್ಪ) ಮಾಡಿಸ್ಸಿದ ಆಸ್ತಿ ಬೇಕಾಷ್ಟು ಉಟ್ಟು. ದೊಡ್ಡಪ್ಪ ದೊಡ್ಡವ್ವನೂ ಒಳ್ಳೆಯವೇ. ಆಸ್ತಿ ಉಟ್ಟುಂತ ಏನೂ ಮುದ್ದಿಲಿ ಬೆಳ್ಸಿತ್ತಿಲ್ಲೆ. ಕಷ್ಟ ಸುಖ ಏನೂಂತ ಅಂವಂಗೆ ಲ್ಯಾಕ್ ಗೊತ್ತುಟ್. ನಮ್ಮೆಲ್ಲಾ ಎಷ್ಟು ಲ್ಯಾಕ್ ನೋಡಿಕ್ಕಂಡದೇ ಗೊತ್ತುಡ್ಡಾ ಒಂದೂ ಹನಿಸಿನೂ ಪೋರ್ಸು ಇಲ್ಲೆ. ಅವಂಗೆ ಬಾಯಿರುಚಿ ಜಾಸ್ತಿ. ನಾವೆಲ್ಲಾ ಸೇರಿಕನಾ ಅಂವ ಹೇಳ್‌ತಿತ್ತ್ "ನಾ ಮದ್ವೆ ಆಗುವಾ ಗೂಡೆಗೆ ಅಡ್ಗೆ ಒಂದು ಲ್ಯಾಕ್ ಗೊತ್ತಿರಕೂ ನಂಗೆ ಹೋಟ್ಲು ಊಟ ಉಂಡು ನಾಲಿಗೆನೇ ಕೆಟ್ಟು ಹೋಗ್ಪು, ಕೆಲ್ಸದವು ಎಷ್ಟು ಮಾಡ್ರೂ ಅಷ್ಟೇ ಅವು ಕಾಟಾಚಾರಕ್ಕೆ ಮಾಡಿಸ್ಸಿ ಹೋದವೇ ಅತ್ತಾ. ಗೂಡೆ ಕೆಲ್ಸ ಮಾಡದಿದ್ದರೂ ತೊಂದ್ರೆ ಇಲ್ಲೇ ನಾ ಅದರ ಸಾಕುವೆಂತಾ, ಅವನ ಒಳ್ಳೆತನಾಕ್ಕೆ ನಂಗ್ಯಾಕೊ ನೀನೇ ಸರೀಂತಾ ಆತು ಹಾಂಗಾಗಿ ನಿನ್ನ ಒಪ್ಪಿಗೆ ಕೇಳದೆ ಈ ಕಾರುಭಾರಕ್ಕೆ ಕೈ ಹಾಕಿದೆ "ಏಳು ಹೇಳಿಯಾ"ಂತ ನಿಶಾನ ಮೋರೆ ನೋಡ್ತು "ಅಂದರೆ ನಾ ನಿನ್ನ ಅಣ್ಣನ ಕಟ್ಟಿಕಣಕೊ" ನಿಶಾ ತಲೆ ಬಗ್ಗಿಸಿಕಂಡು ಹೇಳ್ತು "ಕಟ್ಟಿಕಣ್‌ಕೆನೇ ವಾಕ್ ಇನ್ ಇಂಟರ್‌ವ್ಯೂ" ಮಾಡಿಸಿದ್ದ್ ಇಲ್ಲರೆ ನಂಗೇನೂ ತಲೆ ಕೆಟ್ಟುಟ್ಟಾ ಅಂತಾ ಸ್ವಲ್ಪ ಜೋರಿಲೇ ಸಹನಾ ಹೇಳ್ತು.

ನಿಶಾಂಗೆ ಇದು ಕನಸೋ ನಿಜನೋ ಒಂದು ಗೊತ್ತಾಗದೆ ಕಣ್ಣು ಪಿಳಿ ಪಿಳಿ ಮಾಡಿಕ್ಕಂಡ್ ಆ ಮೇಲೆ ನಿಧಾನ ಆಗಿ ಸಹನಾನ ನೋಡಿ "ನಿನ್ನಣ್ಣ ಅವರ ದೊಡ್ಡತನಾನ

ತೋರಿಸಿದೊ. ನಾ ಈಗ ಒಪ್ಪದಿದ್ದರೆ ನನ್ನ ದಡ್ಡತನ ಆದೆ. ನೀ ನನ್ನ ಮೇಲೆ ನಂಬಿಕೆ ಇಸ್ಸಿ ಸಣ್ಣ ನಾಟ್ಕ ಮಾಡ್ದ ನಿಜ. ಆದರೆ ಇದೇ ನನ್ನ ಬಾಳ್‌ಗೆ ಬೆಳಕ್‌ಂತಾದರೆ ನಾ ಯಾಕೆ ಬೇಡಾಂತ ಹೇಳಿನೆ. ನಂಗೆ ನಿನ್ನ ಮೇಲೆ ನಂಬಿಕೆ ಉಟ್ಟ್. ಇನ್ನು ಹಿರಿಯರು ಹೇಳಿದ್ಹಾಂಗೆ" ಅಂತಾ ಹೇಳಿ ಮೋರೆಲಿದ್ದ ಬೆಗರ್‌ನ ಉಜ್ಜಿಕಂಡ್, ತಲೆಲಿದ್ದ ಕ್ಲಿಪ್‌ನ ತೆಗ್ದ್ ವಾಪಾಸ್ಸು ಹಾಕಿಕ್ಕಂಡತ್ ಆ ಮೇಲೆ ದೇವರ ದಯೆಂದ ಎಲ್ಲಾ ಕೂಡಿಕ್ಕಂಡು ಬಂದು ಹಿರಿಯವೆಲ್ಲಾ ಮುಂದೆ ನಿಂತು ಮದ್ವೆ ಏರ್ಪಾಡ್‌ಗೆ ಸುರು ಮಾಡ್ರೊ.

ಸಹನಾ ಬೀಸಿದ ಕಲ್ಲಿಗೆ ಮಾವಿನಕಾಯಿ ಉದುರಿ ಬಿದ್ದೇ ಬಿತ್ತ್. ಅದಕ್ಕಂತೂ ಕುಸಿಲಿ ಕಾಲು ನೆಲಲಿ ನಿಲ್ತಿಲ್ಲೆ.

ಮದ್ವೆ ಗದ್ದಳಲಿ ಮಾಡ್ರೊ, ಮದ್ವೆ ಮುಗ್ದ ಮೇಲೆ ನಿಶಾ ಸಹನಾನ ಹಿಡ್ಕಂಡ್ "ಸಹನಾ, ನೀನಂಗೆ ನಿನ್ನ ಅಣ್ಣನ "ಇನಾಮು" ಆಗಿ ಕೊಟ್ಟಿಯಾ ಆದರೆ ನಾ ನಿಂಗೆ ಏನೂ ಕೊಡುದೂಂತ ಹೇಳ್‌ಗಡಾ" ಆಗ ಸಹನಾ "ನೀ ಏನು ಋಣ ತೀರಿಸುವ ಹಂಗೆ ಮಾತಾಡ್‌ಬೋಡಾ ನಿನ್ನ ಬಾಳ್‌ಗೆ ನನ್ನಣ್ಣ ಬೆಳಕಾಗಿ ಬಂದ್‌ತ್. ನೀ ಅವನ ಬಾಳ್‌ನ ಕತ್ತಲೆ ಮಾಡದೆ ಇನ್ನೂ ಲ್ಯಾಕ್‌ಲಿ ಬೆಳಗಿಸು ಅಷ್ಟೇ ನಾ ದೇವ್ರೊಟ್ಟಿಗೆ ಬೇಡೂದೂ. ಹಾಂಗೆ ಬೇಕಾರೆ ಒಂದು ಇಪ್ಪತ್ತೈದು ವರುಷದ ಆದ ಮೇಲೆ ದೇವರು ಸಹಾಯ ಮಾಡಿರೇ ನೀ ಬರು ವರ್ಷಲಿ ಒಂದು ಗಂಡು ಕೂಸು ಕೊಟ್ಟರೆ, ಆಮೇಲೆ ನಾ ವಸೂಲಿ ಮಾಡಿಕ್ಕಂಡನೇಂತಾ" ಹೇಳಿಕನ ಅಲ್ಲಿ ಸೇರಿದವೆಲ್ಲಾ "ಹೋ" ಅಂತಾ ಜೋರಾಗಿ ಬೊಬ್ಬೆ ಹಾಕಿದೊ. ನಿಶಾ ನಾಚಿಕೆಂದ ಕೆಂಪಾಗಿ ಹೋತ್.

ಅಷ್ಟೊತ್ತಿಗೆ ತಮ್ಮ ಆಕಾಶ ಬಂದ್ ಹೇಳ್ತ್. ಅಕ್ಕಾ ನೀ ನಂಗೆ ನಿಜವಾಗಿನೂ ಒಳ್ಳೆ ಭಾವನ 'ಇನಾಮು' ಆಗಿ ಕೊಟ್ಟಳ. ನಿಜ ಹೇಳೊಕೂಂತೇಳಿರೆ ನಿಂಗಿಂತ ಭಾವನೇ ಲ್ಯಾಕ್ ಹೇಂಗೆ 'ಲಟ್ಟಾ' ಆಗಿ ಒಳೊ. ನಂಗಂತೂ ಒಬ್ಬ ಬಲ ಭೀಮ ಸಿಕ್ಕಿದ್ಹಾಂಗೆ ಆತ್. ನಂಗೀಗ ಬಲ ಬಂದ್ಹಾಂಗೆ ಆತ್‌ಂತ ಹೇಳಿ ಭಾವನ ಮೈಕಟ್ಟ್‌ನ ಹೊಗಳಿ ಅವನ ರೆಟ್ಟೆನ ಅವನೇ ಹಿಡಕ್ಕಂಡ್ ಕುಸಿ ಪಟ್ಟ್ ಕ್ಕಂಡತ್. ನಿಶಾ ಆಗ ತಮ್ಮಂಗೆ ಜಿಮುಟಿ "ಸುಮ್ಮನಿರು" ಅಂತಾ ಕಣ್ಸನ್ನೆ ಮಾಡ್ತು. ಹಾಂಗೆ ಅಜ್ಜಿನ ಹಕ್ಕಲೆ ಬಂದು ಹಿಡ್ಕಂಡ್ 'ಉಗ್ಗವ್ವಾ ನೀ ಯಾಗೊಳು ಶನಿ, ಶನಿಂತಾ ಕರ್‍ದಿದ್ಹಾಂಗೆ ಆದೆಂತಾ ನನ್ನ ಹೆಸ್ರುನ ಹೇಳ್ತಿದ್ದ ಅಲ್ಲಾ. ಆದರೆ ಆ ದೇವ್ರೂನು ಒಳ್ಳೆವ್ನೆ. ಅಂವ ಇಷ್ಟರ ಮಟ್ಟಿಗೆ ನಂಗೆ ಒಳ್ಳೇದೇ ಮಾಡಿಟ್ಟು ಅಲ್ಲನಾ? ನೀ ನಂಗೆ ಲ್ಯಾಕ್ ಅಡ್ಗೆ ಕಲ್ಸಿದ್ದರಿಂದ ನಂಗೆ ಒಳ್ಳೆ ಗಂಡ ಸಿಕ್ತು. ಇದು ನಿಂಗೆ ಗೊತ್ತಿಲ್ಲದೆ ನಂಗೆ ನೀ ಕೊಟ್ಟ "ಇನಾಮು" ಅಂತ ಹೇಳಿ ಮದುಮಕ್ಕ ಇಬ್ಬರೂ ಉಗ್ಗವ್ವನ ಕಾಲಿಗೆ ಅಡ್ಡಬಿದ್ರೊ.

ಆಗ ಉಗ್ಗವ್ವ ಕಣ್ಣಿಲಿ ನೀರ್ ತುಂಬ್ಕಿಂಡ್ ಕುಶಿಲಿ "ನೋಡ್ ಅಕ್ಕೊ, ಅಡ್ಗೆ ಕೈಗುಣನೂ, ಕೈ ಪೊಲ್ಸುನೂ ನಿಂಗೆ ದೇವ್ರು ಕೊಟ್ಟ "ಇನಾಮು" ಮತ್ತೆ ನಿನ್ನ ಒಳ್ಳೆ ಮನ್ಸು. ಹಾಂಗೆ ಹಿಂದೆನಾ ಜನ್ಮಲಿ ಪುಣ್ಯ ಮಾಡಿದವುಕೆ ಏನಾರು ಒಂದೊಂದು ಒಳ್ಳೆ ಇನಾಮು ದೇವ್ರು ಪೆಸಲ್‌ಗಿ ಕೊಟ್ಟೇ ಕೊಟ್ಟವೇ. ಹೀಂಗ್ಹೇಳಿ ಮದು ಮಕ್ಕಳಿಗೆ ಲ್ಯಾಕ್‌ಲಿ ಬಾಳಿ ಬದ್ಕಿ ಮಕ್ಕಳೇ ದೇವ್ರು ನಿಮ್ಮ ಲ್ಯಾಕ್‌ಲಿ ಇಸ್ಸಲೀಂತಾ ಮನ್ಸು ತುಂಬಿ ಆಶೀರ್ವಾದ ಮಾಡ್ತು.

# ಈ ಸಲನೂ ಮೊದುವೆ ಮುರ್ತ್

ಕಾವೇರಮ್ಮ ಎಂ.ಜಿ

ಸುಧಾ ಉಗ್ಗವನಕ್ಕಲೆ ಕುದ್ದ್ ಕಂಡ್ ಅದ್ ಹೇಳುವ ಪಳ್ಮೆಗಳ ಓಲ್ಪಿಕಂಡ್ ಕುದ್ದಿತ್ತ್. ಉಗ್ಗವ ಹರ್ದ ಒಂದು ಲಂಗನ ಎರ್ಡ್ ಕೊಡಿಗಳ ಜೋಡ್ಸಿ ಅದರ ಹಿಡ್ಯಕೆ ಸುಧನಕ್ಕಲೆ ಕೊಟ್ಟ್, ಅದರ ಇನ್ನೊಂದು ಕೊಡಿಂದ ಹೊಲ್ಯತ್ತಿತ್ತ್. ಕೈ ಹೊಲ್ಯತಿದ್ದರೂ ಬಾಯಿ ಹಳೆ ಕತೆಗಳ ಹೇಳಿಕಂಡೇ ಇತ್ತ್. ಉಗ್ಗವನ ಇಂತಾ ಪಳ್ಮಗಳ ಕೇಳ್ದೊಂತೇಲ್ರೆ ಸುಧಾಂಗೆ ಬಾಳ ಇಷ್ಟ. ಉಗ್ಗವ ಇಂತಾ ಕೊಲ್ಲ ಕೆಲ್ಸಗಳ ಮಾಡಿಕಂಡ್ ಇರಿಕಾಕನ, ಅಲ್ಲಿ ಸುಧಾ ಹಾಜಿರ್. ಉಗ್ಗವಂಗೂ ಅದ್ ಕುಸಿನೇ. ಈ ಕೊಂಡಾಟದ ಪಿಳ್ಳಿನ ಹಕ್ಕಲೆ ತನ್ನ ಹಳೆಕತೆಗಳ ಹೇಳಿಕಂಡ್ ಮೊನ್ಸ್ ಹಗ್‌ರ ಮಾಡಿಕಂಬತಿತ್ತ್.

ಉಗ್ಗವನೂ ಅಜ್ಜಪ್ಪನೂ ಜೋಡಿ ಹಕ್ಕಿಗಳಾಂಗೆ ಒಟ್ಟಿಗೇ ಇರ್ತಿದ್ದೊ. ಅಜ್ಜಪ್ಪಂಗೆ ಬಾಯಿ ಸಾಗರ ಜಾಸ್ತಿ ಪೇಟೆಗೆ ಹೋಗಿ ಬಾಕನ ಒಣ್ಗಿದ ಮತ್ತಿ, ಹಾಳೆ ಮೀನ್, ಕೊಲ್ಲತರು ತಾತಿದ್ದೊ. ಉಗ್ಗವ ಅದರ ಪೊರ್ಲ್ ತೊಳ್ದ್ ಬಿಸ್ಲ್‌ಲಿ ಒಣ್‌ಂಗಿಸಿ, ಹೊಗೆ ತಾಂಗಿಕೆ ಬೆಸೆಗೆ ಮೇಲೆ ಕಟ್ಟಿ ಇಸ್ತಿದ್ದೊ. ಬೇಕಾಕನ ಅದರ್‌ಂದ ಹಂಞ ತೆಗ್ದ್ ಹುಳಿ, ಮೆಣ್ಸ್ ಹಂಞ ಹೆಚ್ಚೆ ಹಾಕಿ, ಕಾಯಿ ಹೂ ಕಮ್ಮಿ ಹಾಕಿ ಪೊಜ್ಜಿ ಕಡ್ದ್ ಅದರ್ಲಿ ಸಜ್ಜಿ ಮಾಡಿಸಿದ ಮತ್ತಿ ಮೀನಾದರೆ ಅದರ ಸುಟ್ಟ್ ತುಂಡು ಮಾಡಿ ಹಾಕ್ತಿದ್ದೊ. ಕೊಲ್ಲತರು ಆದರೆ ಅರ್ರುವ ಕೊದ್ಯಕಿಸಿ, ಕೊಲ್ಲತರುನ ತೊಳ್ದ್ ಹಾಕ್‌ತಿದ್ದೊ. ಹಾಳೆ ಮೀನಾದರೆ ಅದ್ರ ಗೆಂಡಲಿ ಹಾಕಿ ಸುಟ್ಟ್, ಅದರ ಚೋಲಿ ಮೇಲೆ ಇದ್ದ ಪೊಯ್ಯೆನ ಗೀಸಿ, ಗುದ್ದಿ ಹೊಡಿ ಹೊಡಿ ಮಾಡಿ ಗೋಟ್ ಕಾಯಿ ಗುದ್ದಿ ಚಟ್ನಿ ಮಾಡಿ ಅದ್‌ಕೆ ಹಾಕಿತಿದ್ದೊ. ಅಜ್ಜಪ್ಪಂಗೆ ತಿಂಬಕೆ ಈ ಹುಳ್ಳಂಗೆ ಗೈಪುಗ ಲಾಯ್ಕಾಗ್ತಿತ್ತ್. ಒಂದು ಮುಂಡಿ ಹುಗ್ಗಿ ಹೆಚ್ಚಿಗೆ ಉಂಬತಿದ್ದೊ. ಇದ್ ಅವ್ಕೊಬ್ಬಂಗೆ ಹೊರ್ತು ಮನೆಲಿದ್ದ ಬೇರೇವ್ಕೆ ಸಿಕ್ಕ್‌ತಿತ್ಲೆ.

ಇದರೆಲ್ಲಾ ನೆನ್ಸಿಕಂಡ್ ಅಜ್ಜಪ್ಪ ತೀರಿಕೊಂಡ ಮೇಲೆ ಉಗ್ಗವ ಸುಧಾನೊಟ್ಟಿಗೆ ಒಂದಾದಾಗಿ ನೆಂಪು ಮಾಡ್ತಿತ್ತ್, ಇಂದುನೂ ಹಾಂಗೇ ಆತ್.

"ಉಗ್ಗವಾ, ಅಜ್ಜಪ್ಪ ನಿಮ್ಮ ನೋಡಿಕೆ ಬಾಕನ ನೀವ್ಗೆ ನಾಚಿಕೆ ಆತ್ಲೆನಾ?" ಸುಧಾ ಕೇಳ್ತ್.?

" ಆಗ ನಂಗೆ ಹನ್ನೆರಡ್ ವೊರ್ಸ .ನನ್ನ ಉಗ್ಗವ ಯಾಗೊಳು ಅದರ ಮೊಟ್ಟೆಲಿ ಕುದ್ರಿಸಿಕಂಡ್,

" ನಮ್ಮ ಕುಂಞಕ್ಕಂಗೆ ಯಾವ ದೊರೆ ಮಂಞ ಸಿಕ್ಕಿದೆನೋ? ಎಂತ ನನ್ನ ತಲೆ ಪೂಜ್‌ತಿತ್ತ್

ಆಗ ನಾ "ನಂಗೆ ದೊರೆ ಮಂಞನೂ ಬೇಡ ಕುರೆ ಮಂಞನೂ ಬೇಡ"

ನಿನ್ನ ಬುಟ್ಟ್ ನಾ ಎಲ್ಲಿಗೂ ಹೋಕಿಲ್ಲೆ." ಎಂತ ಹೇಳ್ತಿದ್ದೆ.

"ಅದ್ ಹೇಂಗಾದ್? ಒಂದಲ್ಲ ಒಂದು ದಿನ ನೀ ಈ ಮನೆ ಬುಟ್ಟು ಹೋಗಿಯೇ ಹೋಕಲೆ? "ಉಗ್ಗವ ಹೇಳ್ತಿತ್ತ್.

"ದೊರೆ ಮಂಜನೊಟ್ಟಿಗೆ ನಾನೇ ಏಕೆ ಹೋಕು? ನನ್ನ ತಮ್ಮನ ಕಳ್ಸಿನಿ"- ಎಂತ ಹೇಳ್ತಿದ್ದೆ.

ಆಗ ಉಗ್ಗವ ನೆಗಾಡಿಕಂಡ್,"ದೊರೆ ಮಂಜಂಗೆ ಗೂಡೆ ಬೇಕಾದ್. ಹೈದಂಗಳಿಗೆ ಗೂಡೆಗಳ ತಂದವೆ ಹಾಂಗೆ ನಿನ್ನನೂ ಒಂದಲ್ಲ ಒಂದು ದಿನ ಒಬ್ಬ ರಾಜಕುಮಾರನೊಟ್ಟಿಗೆ ಕಳ್ಸಕಲೆ". ಎಂತ ಉಗ್ಗವ ಹೇಳ್ತಿದ್ದೊ. ಆಗ ನಾ ಮರ್ಡಿಕೆ ಸುರು ಮಾಡ್ತಿದ್ದೆ. ನಿನ್ನ ಅಜ್ಜಪ್ಪ ನನ್ನ ನೋಡಿಕೆ ಬಾಕನ ನಂಗೆ ಒಂದು ಕಿರ್ಗೆ ಉಡ್ಸಿ ಅವರ ಎದ್ರ್ ಮೊಂದ್ರಿಲಿ ಕುದ್ರಿಸಿದ್ದೊ. ನಾ ಮೆಲ್ಲಂಗೆ ಒರೆ ಕಣ್ಣ್‌ಲಿ ನೊಡಿಕಾಕನ ಪೊರ್ಲುನ ಹೈದನ ಮೋರೆ ನೋಡಿ ಕುಸಿ ಆತ್. ಅಷ್ಟಾಕನ ಅವ್ವ ಸುಕ್ರುಂಡೆ, ಕಲ್ಸಿದ ಅವಲಕ್ಕಿ ಅದರ ಮೇಲೆ ಎರ್ಡ್ ಬಾಲೆ ಹಣ್ಣ್ ಇಸಿ ಅದರೊಟ್ಟಿಗೆ ಚಾ ತಕಂಡ್ ಬಂದೊ. ಬಂದೊಷ್ಕೆಲ್ಲಾ ತಿಂಡಿ ತಿಂದ್ ಆಕನ ಗೂಡೆ ನಾವ್ಗೆ ಒಪ್ಪಿಗೇಂತ ಹೇಳಿ ಹೊರ್ಟೋದೊ-" ಉಗ್ಗವ ಹಳೆ ಕತೆನೆಲ್ಲಾ ನೆಂಪಿಸಿಕಂಡ್ ಸುಧಾನೊಟ್ಟಿಗೆ ಹೇಳ್ತಿತ್ತ್.

ಅಷ್ಟಾಕನ ನೀರಡಿಕೊಟಗೆನ ಹಕ್ಕಲೆ ಸೀರೆ ಒಗ್ಯವ ಕಲ್ಲ್‌ನ ಹಕ್ಕಲೆಂದ ಒಂದೇ ಸಮಾ "ಸುಧಾ-ಓ ಸುಧಾ"- ಎಂತ ಕರೆವ ಅವ್ವನ ದನಿ ಕೇಳ್ತ್.

'ಉಗ್ಗವಾ, ಅವ್ವ ಕರ್ದವೆ. ಏಕೇಂತ ಕೇಳಿ ಬನ್ನೆ"- ಎಂತ ಹೇಳಿ, ಕೈಲಿ ಹಿಡ್ಕಂಡಿದ್ದ ಲಂಗದ ಕೊಡಿಗಳ ಅಲ್ಲೇ ಕೊಡ್ಕಿ ಸುಧಾ ಅಮ್ಸರಲಿ ಓಡ್ತ್.

ಅವ್ವನ ಹಕ್ಕಲೆ ಬಾಕನ ಅದರ ಎರ್ಡ್ ಕೆಬಿಗಳ ಚಿರಿಂಟಿ ಅವ್ವ ಬೊಯ್ಯಕೆ ಸುರು ಮಾಡ್ದೊ.

'ಎಮ್ಮೆ ನಾ ಎಷ್ಟ್ ಸಲ ಹೇಳ್ದೆ ಅಂಗಿ ಜೋಬು ಖಾಲಿ ಮಾಡಿ ಒಗ್ಯಕೆ ಹಾಕೊಕೂಂತ ಇಂದಾ ನೋಡು ಅದರ ಒಳಗೆ ಎಷ್ಟೆಲ್ಲಾ ಲೋಟಣೆಗ ಒಳೊ".- ಎಂತ ಹೇಳಿ ಅದರ ಲಂಗದ ಜೋಬುಂದ ಒಂದೊಂದೇ ತೆಗ್ದ್‌ದ್ ಕೆಳಗೆ ಹೆರ್ಕಿ ಇಡಿಕೆ ಸುರು ಮಾಡ್ದೊ.

ಗಜ್ಜುಗ, ಜಿಬ್ಲಿ ಆಡಿಕೆ ಇಸಿಕಂಡ ಚಪ್ಪಟೆ ಕಲ್ಲ್‌ಗ ಹುಣ್ಸೆ ಬೀಜ, ಕಡ್ಡಿ ತುಂಡುಗ ಚೋಕುನ ತುಂಡುಗ ನೆಲ್ಲಿಕ್ಯಾ ನೆಕ್ಕರೆ ಮಾಯ್ನ ಮಿಡಿಗ ಎಲ್ಲಾ ಒಂದೊಂದೇ ಹೊರಗೆ ಬಾತ್.

ಸುಧಾ ಅವ್ವನ ಕೈಯಿಂದ ಬುಡ್ಸಿಕಂಡ್ ಅದರೆಲ್ಲಾ ಹೆರ್ಕಿ ಹೆರ್ಕಿ ಹಾಕಂಡ್ ಇದ್ ಲಂಗದ ಜೋಬುಲಿ ತುಂಬಿಸಿಕಂಡ್, ಇನ್ನ್ ಇಲ್ಲಿ ನಿಂತರ, ಬೆನ್ನಿಗೆ ಎರ್ಡ್ ಗುದ್ದು ಬೀಳ್ದೂಂತ ಅಂಬೆರ್ಪುಲಿ ಅಲ್ಲಿಂದ ಕಾಲ್ ಕಿತ್ತತ್. ಉಗ್ಗವನ ಹಕ್ಕಲೆ ಬಂದ್ ನೋಡ್ದೆ ಉಗ್ಗವಂಗೆ ಆಗಳೇ ಹೊಲ್ದ್ ಆಗಿತ್ತ್. ಅದ್ ಸೂಜಿ ನೂಲುನ ತೆಗ್ದ್, ಅದರ ಎಲಾಡ್ಕೆ ಚೆಂಚಿ ಒಳಗೆ ಹಾಕಿ ಲಂಗನ ತೆಗ್ದಕಂಡ್ ಅದರ ಕೋಣೆಗೆ ಹೋಗಿತ್ತ್.

ಸುಧಾಂಗೆ ಬಾಳ ಬೇಜಾರಾತ್. ಇನ್ನ್ ಪಳ್ಮೆ ಕೇಳಿಕೆ ಇಂದ್ ಉಗ್ಗವ ಸಿಕ್ಕಿಕಿಲ್ಲೆ. ಏನ್ ಮಾಡ್ದೂಂತ ಏಚನೆ ಮಾಡಿ ಅದರ ಅಕ್ಕ ರಾಧ ಏನ್ ಮಾಡ್ದೇಂತ ನೋಡಿಕೆ ಅದರ ಕೋಣೆಗೆ ಹೋತ್.

ರಾಧ ಎದ್ರ್‌ಗೆ ರಾಸಿ ರಾಸಿ ಬಳೆಗಳ ಹಾಕಂಡ್ ಕುದ್ದಿತ್ತ್. ಆಗ ಸುಧಾಂಗೆ ನೆಂಪಾತ್. ಇಂದ್ ಅಕ್ಕನ ನೋಡಿಕೆ ಸುಂಟಿಕೊಪ್ಪದ ನೆಂಟ್ರ್‌ಗ ಬಾದೂಂತ. ರಾಧ ಗೂಡೆ ಬಾಳ ಪೊರ್ಲು ಇತ್ತ್. ತಾನ್ ಪೊರ್ಲುಂತ ಹಂಕಾರನೂ ಇತ್ತ್. ಅದ್ ಯಾವ ಗಂಡ್ ಬಂದರೂ ಒಪ್ಪುತಿತ್ಲೆ. ಅದ್ಕೆ ಸರ್ಕಾರಿ ಕೆಲ್ಸದ ಹೈದನೇ ಬೇಕೂಂತ ಆಸೆ. ಹಿಂದೆ ಬಂದ ಎಲ್ಲಾ ಸಂಬಂದಗಳ ಅದ್ ಬುಟ್ಟ ಕಾರಣ ಅಪ್ಪ , ಅವ್ವಂಗೆ ರೋಸಿ ಹೋಗಿತ್ತ್. ಈ ಸಲ ಆದರು ಅಕ್ಕಂಗೆ ಮೊದ್ವೆ ಆಗಲೀಂತ ತಂಗೆಗೆ ಆಸೆ.

ತಂಗೆ ಇದರ್ಲಿ ಯಾವ ಬಳೆಗಳ ನಾ ಇಸೊಕು? ನಂಗೆ ಹಂಜ ಸಾಯ ಮಾಡ್" – ಎಂತ ಕೇಳ್ತ್.
ಸುಧಾ ಬಳೆಗಳ ದಿಟ್ಟಿಸಿ ನೋಡಿ

"ಇಂದಾ ಈ ಮುತ್ತು ಚೂರು ಅರ್ಶಿಣ ಬಣ್ಣದ ಬಳೆಗಳ ಒಟ್ಟಿಗೆ ಚಿನ್ನ ಬೊಟ್ಟು ಇದ್ದ ಪಚ್ಚೆ ಬಳೆನ ಸೇರ್ಸಿಕಂಡ್ ಹಾಕ್ ಬಾಳ ಪೊರ್ಲು ಕಾಂಬೊದು.
ರಾಧಾಂಗೆ ತಂಗೆನ ಆಯ್ಕೆ ನೋಡಿ ಬಾಳ ಕುಸಿ ಆತ್ ಬೇಕಾದ ಬಳೆಗಳ ಹೆರ್ಕಿ ಕೈಗೆ ಹಾಕಂಡ್ ತಂಗೆ ತೋರ್ಸಿ
"ಹೇಂಗೆ?"– ಎಂತ ಕೇಳ್ತ್.
"ಬಾಳ ಪೊರ್ಲು ಕಂಡದೆ"– ತಂಗೆ ಹೊಗಳ್ತ್ ಸುಧಾ ಅಕ್ಕನೊಟ್ಟಿಗೆ
" ಅಕ್ಕಾ ನಿಂಗೆ ತಿಂಬಕೆ ಸುರ್ಳಿ ಪೂರಿ ತಂದ್ ಕೊಡೊಕೊ" ಯಂತ ಕೇಳ್ತ್.
"ಏಕೆ? ನಿಂಗೆ ತಿಂಬಕೆ ಆಸೆ ಆದೆನೋ?– ಎಂತ ರಾಧ ಕೇಳ್ತ್.
" ಹಾಂಗೇನಿಲ್ಲೆ ಸುಮ್ಮನೆ ಕೇಳ್ದೆ"– ಸುಧಾ ಹೇಳ್ದ್. ತಂಗೆನ ಗುಟ್ಟು ಅಕ್ಕಂಗೆ ಗೊತ್ತಿಲ್ಲೆನೊ?– ಅದ್ಕೆ ತಿಂಬಕೆ ಆಸೆ ಆಕನ ಎಲ್ಲಾ ಅಕ್ಕನ ಪುಸ್ಲಾಯಿಸಿ ನಾಗಣ್ಣಬಟ್ರ ಹೋಟ್ಲ್‌ಂದ ಏನಾದರ್ ತಂದ್ ಕೊಡ್ತಿತ್ತ್. ತಂದ್ ಕೊಟ್ಟದಕ್ಕೆ ಅಕ್ಕನೂ ಅದ್ಕೆ ಪಾಲ್ ಕೊಡ್ತಿತ್ತ್.

ರಾದನ ಹಕ್ಕಲೆ ಹಂಞ ಪುಡಿಕಾಸ್‌ಗ ಇರ್ತಿದ್ದೊ ಅದ್ ಲೇಸ್, ಬನಿಯನ್ ಕೊಕ್ಕೆ ಸೂಜಿಲಿ ಹೊಲ್ದ್ ಮಾರ್ತಿತ್ತ್. ಅದರಿಂದಾಗಿ ಅದ್ಕೆ ದುಡ್ಡು ಸಿಕ್ತಿತ್ತ್.

ಇಂದಾ ನಾಕ್ ಸುರ್ಳಿ ಪೂರಿ ತಾ"–ರಾದಾಂಗೆ ದುಡ್ಡು ಕೊಟ್ಟತ್. ಸುಧಾ ಕುಸಿಂದ ನಾಗಣ್ಣ ಬಟ್ರ ಹೋಟ್ಲ್‌ಗೆ ಹೋತ್. ಮನೆಂದ ಹತ್ತ್ ಮಾರ್ ದೂರ ಹೋಟ್ಲ್ ಇತ್ತ್. ತಿಂಡಿ ಕಟ್ಟಿಸಿಕಂಡ್ ಮನೆಗೆ ಬಾಕಾಕನ ದಾರಿಲಿ ಚಿನ್ನದಾಚಾರಿ ಸುಂದರ ಸೇಟ್‌ನ ಸಣ್ಣ ಅಂಗ್ಡಿನ ನೋಡ್ತ್. ಅಂವ ಎದ್ರ್ ಇಸಿಕಂಡಿದ್ದ ಮೋಸಿನ ಗೆಂಡಕ್ಕೆ ಕಬ್ಬಿಣದ ಕೊಳವೆಲಿ ಉರ್ಗಿ, ಉರ್ಗಿ ಕಿಚ್ಚಿ ಸರಿ ಮಾಡ್ತಿತ್ತ್. ಸುಧಾನ ನೋಡ್ದ ಸುಂದರ ಸೇಟ್ ಅದರ ಹಕ್ಕಲೆ ಕರ್ದ್ ಕೊಂಡಾಟಲಿ.

" ಏನ್‌ನೆ ಗೂಡೆ? ಎಲ್ಲಿಗೆ ಹೊರ್ಟ? ಕೈಲಿ ಎಂತದ್? ಅಕ್ಕಂಗೆ ತಿಂಡಿನೋ?"

ಎಂತ ನೆಗಾಡಿಕಂಡ್ ಕೇಳ್ತ್. ಸುಧಾ ತಲೆ ಹಂದಾಡ್ಸಿತ್.

" ಇಲ್ಲಿ ಹಕ್ಕಲೆ ಬಾ. ನಿನ್ನ ಅಕ್ಕನ ನೋಡಿಕೆ ಇಂದ್ ಗಂಡ್ ಬಂದವೆನೋ?" ಸೇಟ್ ಕೇಳ್ತ್."ಎಲಾ ಇಂವಂಗೆ ಹೇಂಗೆ ಗೊತ್ತಾತ್? ಆಗಳೇ ಅಕ್ಕನ ನೋಡಿಕೆ ಗಂಡ್ ಬಂದದೇಂತ ಊರೆಲ್ಲಾ ಸುದ್ದಿ ಆಗುಟು"– ಎಂತ ನೆನ್ಸಿಕಂಡ್ ಸುಧಾ ಹೌದೂಂತ ತಲೆ ಹಂದಾಡ್ಸಿತ್.

"ಎಲ್ಲಿನ ಹೈದ " ಸೇಟ್ ಕೇಳ್ದ್. "ಗೊತ್ತಿಲ್ಲೆ. ನಂಗೆ ಹೊತ್ತಾತ್. ನಾ ಬನ್ನೆ"– ಎಂತಾ ಸುಧಾ ಅಲ್ಲಿಂದ ಒಂದೇ ಓಟಲಿ ಮನೆಗೆ ಬಾತ್.

ರಾಧ ಸುಧಂಗೆ ಬೊಯ್ತ್. "ಏಕೆ ಇಷ್ಟ್ ಹೊತ್ತ್ ಮಾಡ್ದ? ಹೋಗಿ ಎಷ್ಟ್ ಹೊತ್ತಾತ್? ದಾರಿಲಿ ಸೇಟ್ ಕರ್ದ್ ಮಾತಾಡ್ಸಿದರ ಹೇಳ್ತ್.

"ಆ ಸೇಟ್‌ಗೆ ಊರ್ನ ಸುದ್ದಿ ಎಲ್ಲಾ ಬೇಕ್.

ನೀ ಯಾರ್ ಕೇಳ್ರೂ ನಂಗೆ ಗೊತ್ತಿಲ್ಲೇಂತ ಹೇಳೊಕು. ಮನೆ ಇಚಾರ ಬೇರೊವ್ಕೆ ಗೊತ್ತಾಕೆ ಬೊತ್ತ್. ಮಕ್ಕಳ ಬಾಯಿ ಬುಡ್ಸಿಕೆ ಸುಲಭಾಂತ ಅವ್ಕೆ ಗೊತ್ತುಟು ."– ರಾಧಾ ಗೊಣ್ಗಿಕಂಡತ್.

ಮಧ್ಯಾಹ್ನ ಸುಮಾರ್ ಹನ್ನೊಂದು ಗಂಟೆಗೆ ನೆಂಟ್ರ್‌ಗ ಬಂದೊ. ಅಕ್ಕ ಸಿಂಗಾರ ಮಾಡಿಕಂಡ್ ಕೋಣೆಲಿ ಕುದ್ದ ಕಂಡಿತ್ತ್. ರಾಧನ ಅಪ್ಪ, ಅವ್ವ ಸಡ್ಗರಲಿ ನೆಂಟ್ರ್‌ಗಳಿಗೆ ನೀರ್ ಕೊಟ್ಟ್ ಕುರ್ಚಿಲಿ ಕುದ್ರಿಸಿದೊ. ನಾಕ್ ಜನ ಗಣ್ಮಕ್ಕ, ಎರ್ಡ್ ಜನ ಹೆಣ್ಮಕ್ಕ ಬಂದಿದ್ದೊ. ಅಪ್ಪ ಕೆಲ್ಸದ ಆಳ್ ಚೆನ್ನಪ್ಪನ ಕರ್ದ್ ಚಾಳೆ ಹತ್ತಿ ಬೆಂಡ ತೆಗ್ಯಕೆ ಹೇಳ್ದೊ. ಚೆನ್ನಪ್ಪ ಕುಸಿಲಿ ಚಾಳೆಗೆ ಸರಸರ ಹತ್ತಿ ಐದಾರ್ ಬೆಂಡಗಳ ಉದ್ರಿಸಿತ್. ಇನ್ನೊಂದು ಕೀಲೆಂದ ಬೆಂಡಗಳ ಉದ್ರಿಸಿಕೇಂತ ಅದರ ಪಕ್ಕಲಿದ್ದ ಕೊತ್ತಳಿಗೆನ ಹಿಡ್ದ್, ಜಾಗೆ ಪಗರಿಕನ ಒಮ್ಮೆಲೇ "ದುಡುಂ"– ಎಂತ ಕೆಳಗೆ ಬಿದ್ದ ಸದ್ದಾತ್. ಹತ್ತಾಳ್ ಎತ್ತರದ ಚಾಳೆಂದ ಬಿದ್ದ ಚೆನ್ನಪ್ಪಂಗೆ ಮೊತಿ ತಪ್ಪಿತ್. ಎಲ್ಲೊವು ನೆಂಟ್ರ್‌ಗಳ ಬುಟ್ಟ್ ಚೆನ್ನಪ್ಪನ ಸುತ್ತ ಸೇರ್ದೊ. ಮೋರೆಗೆ ನೀರ್ ಚುಪ್ಕಿಸಿದೊ. ಗಾಳಿ ಹಾಕಿದೊ. ಉಹುಂ ಅಂವ ಹುಂದಾಡ್ತಿಲ್ಲೆ. ಮೂಂಕಿಗೆ ಕೈ ಹಿಡ್ದ್ ನೋಡ್ದೊ. ಉಸ್ರಾಡ್ತಿತ್ತ್. ರಾಧನ ಅಪ್ಪಂಗೆ ಧೈರ್ಯ ಬಾತ್ ಸತ್ತತ್‌ಲೇಂತ ಡಾಕ್ಟ್ರ ಬಂದೊ. ಇಂಜೆಕ್ಷನ್ ಕೊಟ್ಟೊ.

"ಹೆದ್ರ್ ಬೊಡಿ ಇನ್ನ ಅರ್ಧ ಗಂಟೆಲಿ ಮೊತಿ ಬಾದು"– ಎಂತ ಹೇಳ್ದೊ. ಚೆನ್ನಪ್ಪನ ಮನೆಗೆ ಸುದ್ದಿ ಹೋತ್. ಅಂವನ ಹೆಣ್ಣ್ ಮೊರ್ಪ್‌ಕಂಡ್ ಬಾತ್ ಎಲ್ಲೋವು ಅದ್ಕೆ ಸಮಧಾನ ಮಾಡ್ದೊ. ಈ ಗಡಿಬಿಡಿಲಿ ಬಂದ ನೆಂಟ್ರ್‌ಗಗಳ ಎಲ್ಲೊವು ಮರ್ತೊ. ಹಂಞ ಹೊತ್ತ್‌ಲಿ ಚೆನ್ನಪ್ಪ ಕಣ್ಣ್ ಬುಟ್ಟ್ ನರ್ಕಿಕೆ ಶುರು ಮಾಡ್ತ್ ರಾಧನ ಅಪ್ಪಂಗೆ ಜೂವ ಬಂದಾಂಗೆ ಆತ್. ಒಳಗೆ ಬಂದ್ ನೋಡ್ರೆ ಬಂದ ನೆಂಟ್ರ್‌ಗ ಸದ್ದಿಲ್ಲದೆ ಜಾಗ ಖಾಲಿ ಮಾಡಿದ್ದೊ. ರಾಧ ಕೋಣೆಂದ ಹೊರಗೆ ಬಾತೇ ಇಲ್ಲೆ ಈ ಸಲನೂ ಮೊದ್ವೆ ಮುರ್ತ್‌ಂತ ಸುಧಾಂಗೆ ತುಂಬಾ ಬೇಜಾರಾತ್.

* * * * *

ಕವನಗ

# ಆರತಿ ಹಾಡು

- ಎಂ.ಜಿ. ಕಾವೇರಮ್ಮ

ಸೋಬಾನೆ ಸೋಬಾನೆ
ಸೋಬಾನೆ ಹೇಳೊಮೊ
ಕೃಷ್ಣ ಪರಮಾತ್ಮಂಗು
ರುಕ್ಮಿಣಿ ದೇವಿಗು
ಸೋಬಾನೆ ಸೋಬಾನೆ
ಸೋಬಾನೆ ಹೇಳೊಮೊ ॥1॥ ಸೋಬಾನೆ

ಹೊಳ್ಯವ ಮಣಿಗಳ
ಚಿನ್ನದ ಪೀಠಲಿ
ರಾಜ, ರಾಣಿನ ಹಾಂಗೆ
ಮೊದ್ಮಕ್ಕ ಕುದ್ದೊಳೊ
ಪಟ್ಟೆ ಸೀರೆನ ಉಟ್ಟ್
ತಟ್ಟೆಲಿ ಆರತಿ ಬೆಳ್ಗಿ
ಮುತ್ತಿನಾರತಿನಾ ಬೆಳ್ಗೋಮೊ ॥2॥ ಸೋಬಾನೆ

ಚಿನ್ನದ ಹರಿವಾಣಲಿ
ಕುರ್ದಿ ನೀರ್‌ನ ತುಂಬಿ
ದಳಿಯದ ನೆಣೆ ಹೋಸಿ
ಆರತಿ ಬೆಳ್ಗೊಮೊ
ಪಟ್ಟೆ ಸೀರೆನ ಉಟ್ಟ
ಮುತ್ತೈದೆ ಹೆಣ್ಮಕ್ಕ
ಚಿನ್ನದಾರತಿನಾ ಎತ್ತೋಮೊ ॥3॥ ಸೋಬಾನೆ
ಹವಳದ ತಟ್ಟೆ ತುಂಬ
ಅಕ್ಕಿನ ತುಂಬಿಕಂಡ್
ಮುತ್ತೈದೆ ಹೆಣ್ಮಕ್ಕ ನಾವು
ಆರತಿ ಬೆಳ್ಗೊಮೊ
ಅಕ್ಕಿನಾರತಿನಾ ಎತ್ತೋಮೊ ॥4॥ ಸೋಬಾನೆ

* * * * *

ಕವನಗ

# ಕತ್ತಲೆ – ಬೊಳ್ಪು

– ಲೀಲಾ ದಾಮೋದರ

ಕತ್ತಲೆ ಬೊಳ್ಪುನ ವ್ಯೆರಿತ
ಹೇಳ್ದೊವು ಯಾರ್?
ಕೆಟ್ಟದರ ಎಲ್ಲ ಕತ್ತಲೆಗೂ
ಒಳ್ಳೆದರ ಎಲ್ಲ ಬೊಳ್ಪಿಗೂ ಹೋಲ್ಸಿ
ಕತ್ತಲೆ ಬೊಳ್ಪುನ ಸ್ನೇಹಕೆ
ಹುಳಿ ಹಿಂಡಿದವು ಯಾರ್?
ಕದ್ದಿರ್ದು ಕಳ್ಳ ಕರಿಗುಡಿ ಕತ್ತಲೆಲಿ
ಅದ್ ಕತ್ತಲೆನ ತಪ್ಪಾ?
ನಡ್ದಿರ್ದು ಹಗಲ್‌ಲಿ
ಅದೆಷ್ಟೋ ಒಳ್ಳೆ ಕೆಲ್ಸಗ
ಅದ್ ಬೆಳಕ್ ಅಪ್ಪರದ್ದೇ ಒಪ್ಪಾ?
'ಕಳ್ಳತನ' ವ್ಯಕ್ತಿತ್ವದ ಭಾಗವೇ ಆದವ್ಕೆ
'ಕತ್ತಲೆ' ಒಂದು ನೆವನ ಮಾತ್ರ!
ನಿತ್ಯ ನಡ್ಕಂಡುಟ್ಟಲ್ಲ ಹಗಲ್ ದರೋಡೆ
ಬೊಳ್ಪುದ್ದು ಏನುಟ್ಟು ಇದರ‍್ಲಿ ಪಾತ್ರ?
ಗಡ್ಡದ ಜೋಗಿನ ಕಿಂದರಿ ನಾದಕೆ
ಮನೆ ಮಠಗಂಳ್ಡ, ಸಂಧಿ ಗೊಂದಿಂದ
ಎಲಿಗಳ ಸಾಲ್ ಹೊರ್‍ಪ್ ಬಂದ ಹಾಂಗೆ
ನೋಟು ಅಮಾನ್ಯವೇ ಕಾರಣ ಆಗಿ
ಗೋಣಿ ಮೂಟೆಂದ ನೆಲದ ಮಾಟೆಂದ
ಸಂಪತ್ತ್‌ನ ಹೊಳೆನೇ ಹರ‍್ಕಂಡುಟ್ಟಲ್ಲ!?
ಹೆಗಲ್‌ಲಿ ಕದ್ದದೋ ಕತ್ತಲೆಲಿ ಕಬಳ್ಸಿದೋ
ಹೇಳುದು ಹೇಂಗೆ?
ಒಮ್ಮೆ ಊಹಿಸಿಕಣಿ ಕತ್ತಲೇ ಆಗದ ಜಗತ್ತ್‌ನ

ಒಂದು ಕೂಸು ಆದರೂ ನಿಲ್ಲುದಾ ನೆಮ್ಮದಿಲಿ ಬೇಗ?
ನವಿರು ಭಾವಗ ಕೆನೆಗಟ್ಟುದು
ಹೊಂಗನಸುಗ ಸಾಂದ್ರ ಆದೇ ಆಗ !
ನಾವಾದರೂ ಹೇಳುದ್‌ಲೆನಾ ಅಯ್ಯೋ ನಿಲ್ಲೊಕು
ದೀಪ ಕೆಡ್ಸ್ ಬೇಗ!?
ಸೂರ್ಯ ಕಂತ್‌ತಿದ್ದ ಹಾಂಗೆ
ಕತ್ತಲೆ ಹೆಗ್‌ಲ್‌ನ ತಬ್ಬಿಕಂಡದೆ, ಜೋಗುಳ ಹಾಡ್ದೆ
ಬಳಲ್ದ ಹಗಲ್ ಕತ್ತಲೆನ ಮಡಿಲ್‌ಲಿ
ಸುಖ ನಿದ್ದೆಗೆ ಜಾರ್ದೆ, ಕನಸ್ ಕಂಡದೆ
ಬೆಳ್ಳಂಬೆಳಕ್‌ಲಿ ಕಾಣದ ನಿಗೂಢ ಬ್ರಹ್ಮಾಂಡ
ಕತ್ತಲೆನ ಕಾವಳಲಿ ತೆರ್ಕಂಡದೆ
ಕೋಟ್ಯಂತರ ಗ್ರಹತಾರೆ ನಿಹಾರಿಕೆಗ
ಕರಿ ಕತ್ತಲೆಲಿ ಮೆರವಣಿಗೆ ಹೊರ್ಟವೆ.
ಮತ್ತೆ ಆದ್ದೆ ಸೂರ್ಯೋದಯ
ತೆಕ್ಕೆ ಸಡ್ಲಿಸಿದ ಕತ್ತಲೆ
ಬೊಳ್ಪುಗೆ ವಿದಾಯ ಹೇಳಿ
ಮರೆಗೆ ಸರ್ದದೆ, ವಿಶ್ರಾಂತಿ ಪಡ್ದದೆ.
ಪುನಾ ಸೂರ್ಯಾಸ್ತ, ಸೂರ್ಯೋದಯ
ಹಗಲ್ ಇರ್ಲ್‌ನ ಆವರ್ತನ
ಕಾಲರಾಯನ ನಿಯತ ನಿಯಮದ ಲಯಬದ್ಧ ನರ್ತನ
ಕಳ್ಳ ಸುಬಗರ ಪಾಪ ಪುಣ್ಯದ ಲೇಪ ಇಲ್ಲದ ವರ್ತನ
ಕಾಲರಾಯನ ನರ್ತನ!

* * * * *

# ಪಾಲ್ ಪಟ್ಟಿ

- ಯು.ಸು.ಗೌ ಗುತ್ತಿಗಾರು

ಅಪ್ಪ ಅಮ್ಮ
ನೆತ್ರ್‌ನ ಬೆಗ್‌ರಾಗಿಸಿ
ಬೆಂದ್ ಬೆಳ್ಸಿದ ಅಲಫಲ ನೆಲ ಹೊಲ;
ಹೊಟ್ಟೆ ಬಾಯಿ ಕಟ್ಟಿ ಮಕ್ಕಳ,
ಬಿತ್ತಿದ ಬೆಳೆನ ಹೇಂಗೋ ಸಾಂಕಿದೊ,
ಮಕ್ಕ ಕಲ್ತ್ ದೊಡ್ಡಿತಾಗಿ ದೂರ ಹೋದೊ
ಪೇಟೆ ಕೊಟಲಿ ಊರು ಕೂಟನ ಮರ್‍ತೊ
ಆದರೆ, ನೆಂಪಾತ್ ಒಮ್ಮೆ ಅವುಕೆ

ಅಪ್ಪ ಅಮ್ಮ ಅಜ್ಜ ಅಜ್ಜಿಯಾಗಿ ಪಾಲ್ ಪಟ್ಟಿಗಾಕನ,
ಅಜ್ಜ ಅಜ್ಜಿ ಬೆಗರ್‌ಲ್ಲಿ ಕಟ್ಟಿದ ಬದ್ಕ್‌ನ ಪಾಲ್ ಮಾಡಿಕೆ
ಊರ ಗ್ರಾಸ್ತರ ಕರ್‍ದೊ
ಹೈದಂಗಳಿಗೆ ಹೆಣ್ಣ್ ಕೊಟ್ಟವರ್‍ನೂ ಕರ್‍ದೊ
ಅಜ್ಜ ಅಜ್ಜಿ ಮೂಲೆ ಸೇರ್‍ದೊ.

ಕಣ್ಣೆದ್‌ರೇ ಸ್ಥಿರ ಚರ ಎಲ್ಲ ಪಾಲಾತ್
ಅಜ್ಜ ಅಜ್ಜಿ ಉಣದೆ ಉಡದೆ
'ನಾಳ್ದ್'ನ ಖರ್ಚಿಗೆಂತ ಉಳ್ಸಿದ ಗಂಟ್‌ನೂ ಪಾಲಾತ್
ಪಾಲ್ ಅಟ್ಟಿನ ಅಕೇರಿಗೆ

ಅಜ್ಜ ಒಂದು ಮಂಜನ ಪಾಲಿಗೆ ಬೀತ್
ಅಜ್ಜಿ ಇನ್ನೊಂದು ಮಂಜನ ಪಾಲಿಗೆ ಅಲ್ಲಾ
ಸೊಸೆನ ಬಾಯಿಗೇ ಬೀತ್!
ಅಂದ್ ಮೊದುವೆಲಿ ಸಂಸಾರ ಸಮಾಜಬಾಂಧವು
"ನೀವು ಒಂದಾಗಿ ಬಾಳಿ" ಅಂತ ತಲೆಗೆ
ಅಕ್ಕಿ ಕಾಳ್ ಹಾಕಿದ್ದ್ ನೆನ್ಪಾಗಿ ಅಜ್ಜ ಅಜ್ಜಿಗೆ
ಇತ್ತ ಕಣ್ಣ್‌ಲಿ 'ಬಳ ಬಳ' ನೀರ್ ಬಾತ್
ಅತ್ತ ಬಂದೊಪ್ಕೆ ಊಟಕೆ ನೀರ್ ಬಾತ್

ನಿನ್ನೆ ಮೊನ್ನೆ ನಾ ಸುದ್ದಿ ಕೇಳ್ದೆ
ಆ ಹೈದಂಗ ವೃದ್ಧಾಶ್ರಮಗಳ
ವಿಳಾಸ ಕೇಳ್ತಾ ಒಳಗಡ!
ಅಪ್ಪ ಅಮ್ಮ ಅಜ್ಜ ಅಜ್ಜಿ ಮಕ್ಕ ಮರಿ ದನ ಕರ್
ಅಲ ಪಲ ನೆಲ ಹೊಲ ಪಾಲ್ ಪಟ್ಟಿ-ಪಟ್ಟಿ-ಪಟ್ಟಿ ................

* * * * *

# ಯಾರ್ ಹೊಣೆ?

– ಬಾರಿಯಂಡ ಜೋಯಪ್ಪ ಮದೆ

ಸವಲತ್ತ್ ಕೊಟ್ಟಷ್ಟ್ ಸೋಮಾರಿಗಾದವೆ
ಹೇಳುತ್ತುಟ್ಟು ಚಾಮೆಪ್ಪ ಕಂಡದರ
ಕೋಪಟೆ ಮಾಡ್ದಷ್ಟ್ ಮಂದಗ ಆದವೆ
ಹೇಳುತ್ತುಟ್ಟು ಚಾಮೆವ್ವ ಅನುಭವಂದ

ಆಡುವ ಮಕ್ಕ ಆಡಿಕೆ ಹೋದವೆ
ಅಂಗಳ ಇಲ್ಲೆ ಮನೆ ಮುಂದೆ
ರಸ್ತೆಲೆ ಆಟ ರಸ್ತೆಲೆ ಕೂಟ
ನೆವನಕೆ ಉಟ್ಟು ಮನೆ ಪಾಠ

ತಂಜಣೆ ಬುದ್ಧಿ ಮಂಜಣೆ ಬುದ್ಧಿ
ಪೀಂಕ್‌ಸುವ ಬುದ್ಧಿ ಅತಿ ಬುದ್ಧಿ
ಎಚ್ಚರ ತಪ್ಪಿರೆ ಪೀಂಕ್‌ಸಿಬುಟ್ಟವೆ
ದೂರ ಇಸಿದಷ್ಟ್ ಸುಕವುಟ್ಟು

ಭಾಷೆಗೆ ಉಟ್ಟು ಕರ್‌ಳ್‌ದ್ ಗಂಟ್
ಎಳ್ಕಂಡ್ ತಬ್ಬಿದೆ ಅವ್ವನಂಗೆ
ಕೂಡ್ಸುವ ಸಕ್ತಿ ಭಾಷೆಗೆ ಉಟ್ಟು
ಅದ್ ಸಾಂಕಿದೆ ಜನಕೆ ನೆಲೆಕೊಟ್ಟ್

ಮನೆಲಿ ಜನ ಇದ್ದರೂ ಸನ
ಫೇಸ್‌ಬುಕ್ಕ್ ಒಳಗೆ ಆಗೊದೆ
ಮನೆಯೊಳಗೇ ಮಾತ್ ಆಡದೆ ಹೋದರೆ
ಅವ್ವನ ಭಾಷೆ ಸತ್ತೋದೆ

ಆಸೆಗೆ ಕೈ ನೀಂಡಿ 'ಸಿಡ್ಕಂಡ್' ಸತ್ತವೆ
ಯವ್ವನ ಕಾಣದೆ ಜೀವನಲಿ
ಸತ್ತರೆ ಸಾಯಲಿ, ಕೊಂದವೆ ಜನಗಳ
ಮುಗ್ದರ ಪಾಲಿಗೆ ಯಮನಾಗಿ

ಹುಟ್ಟುವ ಪೀಳಿಗೆ ತಬ್ಬಲಿಗಾದವೆ
ಬದ್‌ಕ್‌ನ ದಾರಿ ತಪ್ಪೋದೆ
'ಸಮಾಜ ಪಾಠ' ಸರಿಯಿಲ್ಲದೆ ಹೋದರೆ
ಮಸಣನೇ ಆದೆ ಈ ಭೂಮಿ

* * * * *

# ಒಂದು ಪ್ರಶ್ನೆ

– ಸ್ಮಿತಾ ಅಮೃತ್‌ರಾಜ್

ಅಮ್ಮ ಹೇಳ್ದೆ..........
ನಮ್ಮಾಂಗಲ್ಲ ಬುಡಿ ನೀವುಗೆ
ನೀವುಗಿಲ್ಲಾ ಸಾವಿರ ಪಾಲ್
ನಮ್ಮಿಂದ ಮೇಲೆ

ಹೌದಾ..? ಉತ್ತರಕ್ಕಾಗಿ ಪರಂಡಿಕಾಕನ
ಅರೆ! ಉಗ್ಗವ್ವ ಇದೇ ಸೋಬಾನೆ ಹಾಡಿ
ಅವ್ವ ಕೆಬಿದ್ ಒಟ್ಟೆ ಕೊರ್ದ್ದಿರುದಾ....?

ಇಲ್ಲಿ. ಕೆದ್ಕಿಕೋಂಡು ಹೋದರೆ ಸಿಕ್ಕಿದ
ಗುಲಗಂಜಿ ಸುಕಾನೂ ಅರ್ಥ ಹುಡುಕುದರ್ಲೇ
ಸಮ್‌ದು ಹೋದು.

ಎಲ್ಲಾದೂ ಬದಲಾವುಟು ಈಗ
ಅಂದ್‌ನಾಂಗೇ ಇಲ್ಲೆನೇ ಇಲ್ಲೇಂತಾ
ಪುರುಸೊತ್ತು ಆಕಾಕನೆಲ್ಲಾ ಬಡಾಯಿ ಕೊಚ್ಚಿಕಂಬೊದು
ಮುಂದೆನ ತಲೆಮಾರ್‌ಗೆ ಅದನ್ನು ಹಾಂಗೇ
ಸಾಗ ಹಾಕುದು.. ಎಲ್ಲನೂ ಬರೇ
ಬೊಗಳೇಂತಾ ಯಾರಿಗೂ ಗೊತ್ತಾಗದೇನಲ್ಲ.

ಸುಖಾ ಸುಮ್ಮಂಗೆನಾ ಈ ಪರಂಚಾಟ
ಹಾಂಗೇ ನಿತ್ತ್ ಪಿರಿ ಪಿರಿ ಅಜ್ಜಿ ಕತೆಗೆ
ಅಪಚಾರ ಆಕಾಗದಲಾ...?

ಅಮ್‌ರ್ಸಿ ಹಿಡ್ದ್ ಕಣ್ಣೀರ್ನ ಕಟ್ಟೆ
ನೀರುಳ್ಳಿ ಚೋಲಿ ಸುಲಿಯಕಾಕನ
ದಂಡೆ ಮೊಗ್ಗಿ ಹರಿಯೊದು
ಮೆಣ್ಸ್‌ನ ಗಾಟಿಗೆ ಅಕ್ಷಿಂತೇಳಿ
ಒಳಗಿನ ಕಾರನ್ನೆಲ್ಲಾ ದಬ್ಬಿ ಹೊರಗೆ ಹಾಕುದು
ದಮ್ಮು ಕಟ್ಟಿ ಒಗ್ಗಣೆ ಸೊಪ್ಪಿಗೆ

ಹಿಂಗಡೆ ಬೇಲಿ ಮುಟ್ಟ ಓಡಿ
ಕಣ್ಣ್ ಮೂಗು ಒರ್ರಿಸಿಕಂಬೊದು
......... ಹೀಂಗೇ ಮತ್ತೊಂದು ಕೋಲಕ್ಕೆ
ಗೆಜ್ಜೆ ಕಟ್ಟುವ ನಿರಂತರ ಕತೆ
ಕಾಲ ಕಾಲಕ್ಕೂ ಹಿಂದೆನೇ ಓಡಿ ಬಾವ ಗೀತೆ
ಹಳ್ತಾದರೂ ಹಳಸಲಾತ್ಲೆ

ಹೆಣ್ಣುಂತೇಳುವ ಪಟ್ಟ ಸಿಕ್ಕಿಕಾಕನಲೇ
ನಾದಿ ನಾದಿ ನಂಜಿಕೋಂಡು ಬಾವ ಬೇಗುದಿ
ಒಳಗೆ ಹಬೆ ಆಡಿಕಂಡೇ ತಣ್ಣಂಗೆ ಸುಡ್‌ವ
ಒಳ ಕುದಿ
ಇದ್ ಯಾರಿಗೂ ಕಾಣಿಕಾಗದ್ ಕಾಣ್ಸಿಕಣಿಕೂ ಆಗದ್

ಸೀತೆ, ಮಂಡೋದರಿ, ದ್ರೌಪದೀಂದ ಹಿಡ್ದ್
ನಮ್ಮ ಕರ್ಳಬೊಳ್ಳಿನ ತುಂಡ್‌ಗ ಉಂಡ ವ್ಯಥೆ
ಕತೆಯಾಗಿ ಹೋದ ಸಂಗತಿಗೆ ಮನಸ್‌ಗ
ಬೆಂದ್ ಮೆಡ್ಡೆಯಾದವೆ ಇಲ್ಲಿ

ಈಗ ಅದೇ ಸುಡುವ ಬೇನೆಗ
ಪದ ಸಾಲೊಳಗೆ ಮುದ್‌ರಿಕಂಡ್
ಮರ್ಡಿಕಾಕನ ಸುಲಾಬಲಿ ಅರ್ಥಕ್ಕೆ
ಸಿಕ್ಕುಲ್ಲೆ ಕವಿತೆ.
ಕಾಲ ಬದಲಾವುಟು. ಭಾವನೆಗ
ಬದಲಾಗುವನಾ...?
ಇದ್ ಪ್ರಶ್ನೆ

* * * * *

# ನೆನ್ಪಾದೆ ನಂಗೆ ಒಂದೊಂದೇ.......

– ಯೋಗೀಶ ಹೊಸೊಳಿಕೆ

ಅವ್ವ ನೀವ್ ಅಂದ್ ಹೇಳ್ತ್ತಿದ್ದರಿ
ಯಾರ್ದೋ ಮಾಯಿನ ಮರಕ್ಕೆ
ಕಲ್ಲ್ ಹೊಡೆಕೆ ಹೋದ ನಮ್ಮ ಕರ್ದ್
ಓ.. ಮಕ್ಕಳೇ
ಹೊಡಿಬೋಡಿ ಲಾಗ ಮಾಡ್‌ಬೊಡಿ ರಗಳೆ
ರಜೆ ಸಿಕ್ಕಿರೆ ಸಾಕ್ ಈ ಮಕ್ಕಳ
ಆಳ್ವುದು ಹೇಂಗೆ?
    ನಮ್ಮ ಕಾಲಲಿ ಮಕ್ಕ
    ಶಾಲೆ ಮೆಟ್‌ಕಲ್ಲ್ ಹತ್ತೊವೇ ಇಲ್ಲೆ
    ಎಲ್ಲಿಯಾರ್ ಹತ್ತಿರೂ ಒಂದುನೇ- ಎರ್ಡ್ನೇ
    ಅಪ್ಪಾಕನ ಅಕ್ಕನ ಕೂಸುನ ನೋಡಿಕಂಕೆ
    ಅಣ್ಣನ ಕೂಸುನ ನೋಡಿಕೆ ಮನೇಲಿ ನಿಲ್ಸುವೆ
    ಇನ್ಸ್ ಕೆಲವು – ಈಗ ತಿರ್ಗುವ ಮಕ್ಕ
    ಪಂಡ್‌ಲಿ ಅಯ್ಯೆಕ್ಕಳ ಒಟ್ಟಿಗೆ ನೇಜಿ ನೆಡಿಕೆ
    ಕೆಯಿ ಕೊಯ್ಯಕೆ ಗದ್ದೆಗೆ ಹೋತಿದ್ದೋ
ಆದರೆ ಈಗ ಅವ್ವ..
ಕಾಲನೇ ಕೆಟ್ಟ್ ಹೋಗುಟ್ಟು
ನಮ್ಮ ಮಕ್ಕಳ ಅವಸ್ಥೆನ ನೋಡಿ
ಕುದ್ದುಕಂಡ್ ಆಲ್ಸ್‌ಕನ
ನೆನ್ಪಾದೆ ನಂಗೆ ಒಂದೊಂದೇ..
    ನಾವು ಅರ್ದಮರ್ದ ಕಲ್ತರೂ
    ಒಬ್ಬನೇ ಮಂಜ ಹೆಚ್ಚಿಗೆ ಕಲೆಕ್ಕುತಾ
    ದೂರದ ಪೇಟೆಲಿ ಲ್ಯಾಕುನ ಶಾಲೆಗೆ ಹಾಕಿರೆ
    ಮನೆ ಕಡೆಗ್ಯಾನನೇ ಇಲ್ಲೆ
    ಈ ವರ್ಷಕ್ಕೆ ಶಾಲೆ ಮುಗ್ದದೆ
    ಇನ್ನಾದರೂ ಅಪ್ಪ ಅಮ್ಮನ ನೋಡಿಕಣ್
    ಇದ್ದ ಜಾಗೆನ ಕೂಡಿಕೆ ಬಾದುಲೆನಾ
    ಎಂತಕ್ಕೆ ಬಾದು ಖಚಿಟಿಂಜನ್ನು ಸಿಕ್ಕುದುಲೆ
    ಕುಛಿಣಡಿಜ ನೋಡಿಕೆ ಖಿಚಿಳು ಹಕ್ಕಲೆ ಇಲ್ಲೆ
    ಕಾಡ್ ಗುಡ್ಡೆಗೆ ನಾಯಿ ಗೈಂದಗೆ ಗೈಯಕೆ ನಾ ಬಾದುಲೆ
    ನಾ ಇಲ್ಲೆ ಅಂಟರಿಚಿಟಿಧಿ ಗೆ ಕೆಲ್ಸಕ್ಕೆ ಸೇರ್ನೆ
    ಬೇಕಾರು ನೀವುನು ಜಾಗೆ ಮಾರಿ ಇತ್ತ ಬನ್ನಿ
    ನನ್ನ ಮಂಜನ ಈ ಮಾತ್‌ನ ಕೇಳಿ

ಬೆಳಿ ತಲೆಲಿ ಕುದ್ದುಕಂಡ್ ಆಲ್ಸಕನ
ಸತ್ತ್ ಸೊರ್ಗಲಿ ಇರುವ ಅವ್ವ
ಹಲ್ಲ್ ಇಲ್ಲದ ಬಾಯಿಲಿ ಹೇಳ್ದ
ಆ ಮಾತುಗ...
ನೆನ್ಪಾದೆ ನಂಗೆ ಒಂದೊಂದೇ........

* * * * *

# ಒಂದ್ ಹೈದನ ಸೋಬೇನೆ

– ಲೋಹಿತಾಶ್ವ ಕ್ಯೊಂಗಾಜೆ

ಅಂದ್ ಒಮ್ಮೆ ಸಿಕ್ಕಿರೂ ಮಾತಾಡಿ ಒಪ್ಪಿರೂ
ಏಕೊ ಮತ್ತೆ ತೊಪ್ಪಿ ಹೋದ ಗೂಡೆ ನೀನೆ
ಹಳ್ಳಿ ಹೈದ ನನ್ನ ಮೇಲೆ ಏನ್ ದೂರು,
ಹೇಳ್ ನೀನೆ

ಮನೆ ತುಂಬಾ ಜನನೇ, ಹಟ್ಟಿ ತುಂಬಾ ದನನೇ
ನಿನ್ನ ನೆವನ ಇಷ್ಟ್ ತಾನೆ?
ತೋಟ ತುಂಬಾ ಸೋಗೆನೆ, ಅದರ ಕೆಳಗೆ ಅಡ್ಕೆನೆ
ಅಲ್ಲಿ ನಿಂಗೆ ಕೆಲ್ಸ ಇಲ್ಲೆನೆ.

ಅಡ್ಗೆ ಪೂರಾ ಅಮ್ಮನೆ, ಹಾಲ್ ಕರಿದು ಅಪ್ಪನೆ
ಮನೆ ಒರ್ಸುದು ದಿನಾ ನಾನೆ
ಇದ್ದ್‌ಬುಡು ನೀ ಸುಮ್ಮನೆ

ಒಗಿವ ಮಿಷನ್ ತಂದಳೆ, ಫ್ರಿಜ್ ಮೊನ್ನೆ ತೆಗ್ದಳೆ
ಎಲ್ಲಿಡಿ ಟಿ.ವಿ. ಉಟ್ಟು ಅದ್ ನಿಂಗೆನೆ
ಕೆ.ವಿ.ಜಿ.ಲಿ ಕೇಳಿನೆ, ಸ್ಕೂಟಿ ತೆಗ್ದ್ ಕೊಟ್ಟನೆ
ಕೆಲ್ಸ ಮುಗ್ಸಿ ಸಂಜೆ ಬಾನೆ
ಹಳ್ಳಿ ಹೈದ ನನ್ನ ಮೇಲೆ ಏನ್ ದೂರು
ಮನ್ಸ್ ಮಾಡಿ ಒಮ್ಮೆ ಒಪ್ಪಿ ಮನೆಗೆ ಬಾನೆ.

* * * * *

# ಕೈ ಬುಡದ ದೇವ್ರು

– ಹೇಮಲತಾ ಗಣೇಶ್ ಕಜೆಗದ್ದೆ

ಹೊತ್ತು ಕಂತಿತ್
ಹಿಂಬೊತು ಆಕಂಡ್ ಬಾತ್
ಸುಡುಬಿಸ್ಲ್‌ನ ಬೇಗೆ...
ಕಡ್ಮೆ ಆತ್ಲರೆ ಹೇಂಗೆ....!? ॥1॥

ಚದ್‌ರಿದ ಮೋಡಲಿ
ಕಂದಿರದ ಬಣ್ಣಲಿ..
ಕಾಮನ ಬಿಲ್ಲ್..
ಕಾಂಬೋದ್ ಹೇಂಗೆ..!? ॥2॥

ಒಲ್ಲಿ ಹೊದ್ದ್ ಮೂಲೆಲಿ
ಮಲ್ಗಿದ ಹೈದಂಗೆ.....
ದರ್ಪುವ ಚಳಿನ
ಅರಿವಾದು.. ಹೇಂಗೆ..!? ॥3॥

ಯಾರ್ದೋ.. ಕರಿನೋಟ್
ಕರಿ.. ಕೋಟ್‌ನೊಳಗಿತ್ತ್..
ಹೊರ್‌ಕಡೆ ಬಂದ್
ಬೊಳ್ಪು ಕಾಂಬೊದು.. ಹೇಂಗೆ..!? ॥4॥

ಆಂಬ್ರಕೆ ಗೊತ್ತುಟಾ...
ತುಂಡುನ.. ರುಚಿ...
ಆದ್ರೂನೂ.. ಗೈಪುಲಿ..
ಉಳ್ದದ್ ಹೇಂಗೆ..!? ॥5॥

ಎಡ್ದ ಕೈ ಬಲ್ದ ಕೈನ
ನಂಬುದೇ ಇಲ್ಲೆಗಡ..
ನಿತ್ತ ನೆಲ ಬಾಯಿಬುಟ್ಟ್..
ಎಲ್ರ ನುಂಗಿದೆ ಗಡ...!! ॥6॥

ಸತ್ಯ ನಿನ್ನೊಳಗುಟ್ಟಾ..!?
ನೀ ಬದ್ಕಿಕಾದ ಹಾಂಗೆ...!!
ಬೆಳ್ಗಂಗೆ.. ಯಾಗೋಲೂ.. ಬೆಳ್ಗಂಗೇನೇ
ಕೈ ಬುಡದ ದೇವ್ರ ಹಾಂಗೇ ॥7॥

* * * * *

# ನ್ಯಾಯ

– ರಮ್ಯಶ್ರೀ ಸೋಣಂಗೇರಿ,
ನಡುಮನೆ

ನಿಂಗಾಗಿ ಕಾದೆ ಕಾದೆ ಕಾದೆ
ಕಾಯದ್ರಲ್ಲೆ ಕಳ್ದು ಹೋತ್ ಸಮಯ
ಕೇಳಿಕೆ ಹೆದ್ರಿಕೆ ಇಲ್ಲೆ, ಎಲ್ಲನೂ
ಪ್ರಯತ್ನಂದ ಸಿಕ್ಕುದುಂತ ಧೈರ್ಯ..
ನೀ ನಡ್‌ದಲ್ಲೆ ನಾ ನಡ್ದೆ
ಎಷ್ಟೋ ಚಪ್ಲಿಗ ಸವ್‌ದೋತು
ಕಡೆ ಇಲ್ಲದ ಅಲ್‌ದಾಟ
ಮನ್ಸ್‌ನೊಳಗೆ ಪಗಡೆ ಆಟ..
ಕಡೆ ಪ್ರಯತ್ನಲಿ ಆದ್ರು ಸಿಕ್ಕುದುಂತ
ಇದ್ದ ನಂಬಿಕೆ ಸುಳ್ಳಾಗ್‌ವಾಂಗೆ
ಹಕ್ಕಲೆ ಬಂದಂಗೆ ದೂರ ದೂರ ಹೋದಿಯ ನೀ,
ನೀ ನಂಗೆ ಸಿಕ್ಕುಲೆಂತ ಹೆದ್ರಿಕೆ
ಸುರು ಆವ್ಟ್ ನನ್ನೊಳಗೆ...
ಬಡ್‌ತನಲಿ ಇರ್‌ದಕ್ಕೆನಾ ಈ ಶಿಕ್ಷೆ? ಗೊತ್ಲೆ
ನಿನ್ನ ಪಡ್‌ಕಂಬಕೆ, ಕಡೆಗೂ ದುಡ್ಡು ತಿನ್ನಿದೆ
ನಿನ್ನ ಮೇಲೆ ಭಾರ ಹಾಕಿ ಬಂದೊಳೆ "ದೇವತೆ"
ಕಣ್‌ಗೆ ಕಟ್ಟಿರ್‌ವ ಬಟ್ಟೆನ ಬಿಚ್ಚಿನೋಡ್...
ನಂಗಾದ ಅನ್ಯಾಯನ ಯಾರೊಟ್ಟಿಗೆ ಹೇಳ್‌ಲಿ
ನಿಂಗಾಗಿ ಹತ್ತದ ಮೆಟ್ಲ್‌ಗ ಇಲ್ಲೆ
ಹೋಗದ ಜಾಗೆ ಇಲ್ಲೆ.. ಆದ್ರು
ನಂಗೆ ಸಿಗದಾಂಗಾದ ನೀ "ನ್ಯಾಯ"

* * * * *

# ಹುತ್ತರಿ

-ಕಟ್ರತನ ಲಲಿತಾ ಅಯ್ಯಣ್ಣ

ಕೊಡಗ್‌ಲಿ ಹುತ್ತರಿ ಸುಗ್ಗಿ ಹಬ್ಬ
ಧಾನ್ಯ ಲಕ್ಷ್ಮಿ ಮನೆಗೆ ಬರ್‌ವ ಹಬ್ಬ
ತಾನ ನನ್ನನ ನಾನನಾ ತಾನ ನನ್ನನ ನಾನನಾ ॥2॥
ಮನೆ ಕಳ ಗುಡ್ಸಿ ಸಾರ್ುವೆ
ಹೂವು ಮಾವು ತೋರಣ ಕಟ್ಟುವೆ ॥ತಾನ॥

ವರ್ಷಕ್ಕೊಂದು ಹುತ್ತರಿ
ದೊಡ್ಡವ್ರ ಜೋಬುಗೆ ಕತ್ತರಿ ॥ತಾನ॥
ಎಲ್ಲಾ ಹೊಸ ಬಟ್ಟೆ ಉಟ್ಟವೆ
ಮಕ್ಕ ಪಿಟಾಕಿ ಹೊಟ್ಸುವೆ ॥ತಾನ॥

ಬದ್ಕ್‌ನ ಅರ್ಸಿ ಹೋದೋವು
ಪಟ್ಟಣ ವಾಸಿ ಆದೋವು ॥ತಾನ॥
ಎಲ್ಲವು ಬಂದ್ ಸೇರೋಕು
ಕುಟುಂಬ ಸಮೇತ ಬರೋಕು ॥ತಾನ॥

ಹುತ್ತರಿಗೆ ತಂಬಿಟ್ಟ್ ಮಾಡುವೆ
ಹುತ್ತರಿ ಗೆಣ್ಸ್‌ನು ಬೇಯ್ಸುವೆ ॥ತಾನ॥
ಐನ್‌ಮನೆಲಿ ಎಲ್ಲವು ಸೇರುವೆ
ಸೇರಿ ಕದ್ರ್ ತಂದವೆ ॥ತಾನ॥

ಹೊಸಕ್ಕಿ ಪಾಯ್ಸ ಮಾಡುವೆ
ಸುಂಟಿ ಪಜ್ಜಿನು ಮಾಡುವೆ ॥ತಾನ॥
ಒಟ್ಟಿಗೆ ಊಟ ಮಾಡೋಕು
ಹಳೇದೆಲ್ಲಾ ಮರ್‍ಯೋಕು ॥ತಾನ॥

ಮಾರ್ನೆ ದಿನ (ಹುತ್ತರಿ) ಊರೊಮೆನ್
ನಡ್ದದೆ ಪ್ರತಿ ವರ್ಷಕ್ಕೊಮ್ಮೆ ॥ತಾನ॥
ಊರವು ಎಲ್ಲಾ ಬರೋಕು
ಊರ್ ಬಾಣೆಲಿ ಸೇರೋಕು ॥ತಾನ॥

ನಡ್ದದೆ ಅಲ್ಲಿ ಆಟೋಟ
ನೋಡಿಕೆ ಪೊರ್ಲು ಆ ನೋಟ ॥ತಾನ॥

ದೊಡ್ಡವು ಸಣ್ಣವು ಸೇರುವೆ
ವಯಸ್‌ನೆಲ್ಲಾ ಮರ್ತವೆ ॥ತಾನ॥

ಆಡಿ ಓಡಿ ನಲ್ದವೆ
ಮನ್ಸ್‌ನ ಬ್ಯಾನೆ ಮರ್ತವೆ ॥ತಾನ॥
ಎಲ್ಲಾ ಕುಟುಂಬದವು ಬಂದವೆ
ಪೋರ್ಲುಲಿ ಸಭೆ ನಡ್ಸಿವೆ ॥ತಾನ॥

ನಮ್ಮಲ್ಲಿ ಉಟ್ಟು ಹತ್ತ್ ಕುಟುಂಬ
ನಮಿಗೆ ಉಟ್ಟು ಹದ್ನೆಂಟ್ ಗೋತ್ರ ॥ತಾನ॥
ಎಲ್ಲಾ ಕುಟುಂಬಗ ಸೆರೋಕು
ಸೇರಿ ಗೌಜಿ ಮಾಡೋಕು ॥ತಾನ॥

ಗೌಡ್ರುಗಳ ಹಿರಿಮೆ ಸಾರೋಕು
ಆಚಾರ ವಿಚಾರ ಕಲಿಯೋಕು ॥ತಾನ॥
ಕಷ್ಟಲಿ ಸುಖಲಿ ಒಂದಾಕು
ಸೇರಿ ಸಹಾಯ ಮಾಡೋಕು ॥ತಾನ॥

ಒಂದಾಗಿ ಎಲ್ಲವು ಬಾಳೋಕು
ಒಗ್ಗಟ್ಟ್‌ಲಿ ಬಲವುಟ್ಟು ತೇಳೋಕು ॥ತಾನ॥
ಶುಭ ಕಾರ್ಯನ ಜಂಬರ ಮಾಡ್ಕನ
ಗುರು ಹಿರಿಯರ ಆಶೀರ್ವಾದ ಪಡ್ಯೋಕು ॥ತಾನ॥

ಪೋರ್ಲುಲಿ ಜಂಬರ ನಡಿಯಕು
ಕಾರಣಂಗೆ ಎಡೆ ಇಸೋಕು ॥ತಾನ॥
ನಮ್ಮ ಭಾಷೆ ಅರೆಭಾಷೆ
ಅದ್ನ ನಾವ್ ಮರ್ಯಕಾದ್ ॥ತಾನ॥

ಭಾಷೆನ ಉಳ್ಸಿ ಬೆಳ್ಸೋಕು
ಭಾಷೆನ ನಾವೆಲ್ಲಾ ಬಳ್ಸೋಕು ॥ತಾನ॥ 2॥
ಭಾಷೆನ ಬಳ್ಸಿರೆ ಬೆಳ್ದದೆ
ಸಂಸ್ಕೃತಿ ಸಾಹಿತ್ಯ ಉಳ್ದದೆ ॥ತಾನ॥2॥
ತಾನ ನನ್ನನ ನಾನನಾ ತಾನ ನನ್ನನ ನಾನನಾ ॥2॥

* * * * *

# ಪೆರಾಜೆಲಿ ದೇವುರ ಮಹಿಮೆ

-ಭವಾನಿಶಂಕರ ಹೊದ್ದೇಟಿ

ಪೆರಾಜೆ ಗ್ರಾಮಕೆ ಹಿರಿಮೆನ ತಂದ ದೇವುರುಂತೇಳಿರೆ ಶಾಸ್ತಾವು
ಗ್ರಾಮದ ದೇವುರ ಪೂಜಿಸುವಂತ ಪೆರಾಜೆ ಗ್ರಾಮದ  ಜನ ನಾವು
ಗ್ರಾಮದ ದೇವತೆತೇಳಿರೆ ಊರ್‌ಲಿ। ನಂಬಿಕೆ  ಜನಕೆ ಬಾರಿಟ್ಟು।
ನಮ್ಮೂರ ದೇವುರ ಶಕ್ತಿನ ತಿಳಿಯಕೇ ಪೆರಾಜೆಗೆ ಬನ್ನಿ ದಯವಿಟ್ಟ್॥

ಶಾಸ್ತಾವುನ ಜೊತೆ ಕರಿಭೂತನ ಮಹಿಮೆನು। ತುಂಬಾ ಉಟ್ಟು ಇಲ್ಲಿ।
ನಂಬಿದ್ ಕರಿಭೂತ ಪಂಜುರ್ಲಿಗೆ। ಹರಕೆನ ಹೇಳಿಕಂಡವೆ ಇಲ್ಲಿ॥
ತುಂಬಾ ಕಠಿಣದ ಭೂತಗ ಇಲ್ಯೊಳೊ। ನಮ್ಮ ಪೆರಾಜೆ ಅಲ್ಲಿ
ದಿನ ನಿತ್ಯನು ದೇವುಗೆ ಪೂಜಾರತಿ ಎಲ್ಲನು। ನಡ್ಕಂಡಿದ್ದದೆ ಇಲ್ಲಿ

ಇನ್ನೂ ಕೆಲವು ದೇವುಗ ಇಲ್ಯೋಳೊ। ಒಂದೆ ಕಡೆಲಿ ಜೊತೆಲಿ।
ಆ ದೇವುಗಳ ನಂಬಿದ್ ಬಾಳುವೆ ನಡ್ಸಿವೆ। ಊರ್‌ನ ಜನಂಗ ಅಲ್ಲಿ॥
ನಂಬಿದ ಜನಕೆ ಕೈ ಬುಡಿಕಿಲೆ ದೇವುಂತ। ನಮ್ಮೂರ್‌ನ ಜನಕೆ ಗೊತ್ತ್।
ಹಂಗಾಗಿ ಜನಂಗ ಪೂಜಿಸುತ್ತಿದ್ದವೆ।ದೇವುರ ಮೂರು ಹೊತ್ತ್॥

ಶನಿ ದೋಷಕೆ ನೊಂದವು ಬೆಂದವು ಬಂದವೆ ಅಂತವು ಇಲ್ಲಿ।
ಪ್ರತಿಶನಿವಾರನು ಶನಿ ದೇವರುಗೆ ಪೂಜೆಗ।ನೆರವೇರಿಸುವೆ ಜನ ಇಲ್ಲಿ॥
ಶನಿದೋಷನ ಪರಿಹರಿಸಿದ್ ಜನಂಗ।ಸುಖ ಕಂಡವೆ ಅವು ಇಲ್ಲಿ॥
ಶನಿ ದೇವುರ ಮಹಿಮೆನ ಕಂಡ್‌ದ್ ಜನಂಗ। ಶರಣಾದವೆ ಅದ್ಕೆ ಇಲ್ಲಿ।

ಅಂದ್‌ನ ಜನಂಗ ಅಡಿಪಾಯ ಹಾಕಿದ್। ಕಟ್ಟಿದೊ ದೇವಸ್ಥಾನ।
ನಿತ್ಯನೂ ಪೂಜೆ, ಜಾತ್ರೆನ ಮಾಡಿದ್। ನಡ್ಸಿಕಂಡೋದೊ ಅದನ॥
ವೈಭವೀಕರಿಸಿಕೆ ಇಂದ್‌ನ ಜನಂಗ। ಮಂದಿರ ದುರಸ್ಥಿ ಮಾಡಿ।
ಜಗಕೆ ತಿಳಿಯಕೆ ಕಟ್ಯಳೊ ಅದರ। ಸೊಭಗ್‌ನ ಒಮ್ಮೊ ನೋಡಿ॥

ಕುಟುಂಬ ಕಲಹ, ರೋಗರುಜಿನ। ಎಲ್ಲನು ಭೂತಕೆ ಹೇಳಿ।
ಸರಿಪಡಿಸಿದ್ ದೇವುರ ನಂಬಿದ ಅದರ। ಮಹಿಮೆನ ನೀವು ಕೇಳಿ॥
ಕರಿಭೂತಕೆ ಹರಕೆನ ಅರಿಕೆ ಮಾಡದ। ಜನಂಗಳೇ ಊರ್‌ಲಿ ಇಲ್ಲೆ।
ಭಕ್ತರ ಹರಿಕೆನ ಪರಿಪಾಲಿಸಿ ದೇವುರು।ಸರಿಪಡಿಸದ್ ಯಾದೂ ಇಲ್ಲೆ.।

ದೇವುರ ಶಕ್ತಿನ ಕಂಡ್‌ದ ಜನಂಗ । ಕಾನಿಕೆ ಕೊಟ್ಟವೆ ಬಂದ್
ಮಂದಿರ ಜೀರ್ಣೋಧ್ಧಾರ ಮಾಡಿಕೇಸುರಿತವೆ ಅಲ್ಯೋಳ ಇಂದ್॥
ಮಂದಿರಲೆಲ್ಲೋ ದೋಷನೆ ಕಾಣದೆ। ಕಟ್ಯೊಳೊ ಕಮಿಟ್ಯವು ಅದರ।
ದೇವುರ ಕರುಣೆನು ಅದ್‌ಕೆ ಉಟ್ಟು ನೆನ್ನೊಕು ನಾವಿಂದದರ॥

ಸುಭಿಕ್ಷೆ ಗ್ರಾಮ ಆಗುಟು ಇಂದೇ ಪೆರಾಜೆ ಗ್ರಾಮದ್ ಕುಷಿ ನಾವಗೆ।
ಬಡವನೆ ಇಲ್ಲದ ಗ್ರಾಮಂತೇಳಿರೆ। ಆಕಿಲೊ ಹೇಳಿ ಕುಷಿ ನೀವ್ಗೆ
ಗ್ರಾಮದ ಹೆಸರ್‌ನ ಎತ್ತರಲಿಸಿಕೆ। ಊರ್‌ನ ಜನಂಗಳೇ ಒಂದಾಗಿ
ಹರಸುವೆ ದೇವುರ ಕರುಣೆನು ಉಟ್ಟು ಎಲ್ಲವು ಅವಂಗೆ ತಲೆಬಾಗಿ॥

ನಮ್ಮೂರ ದೇವುಗೆ ಇರುವಾ ಶಕ್ತಿ। ಹೊರ ಊರ್‌ನ ಜನಕು ಗೊತ್ತುಟು।
ಅದರ ನಂಬಿರೆ ಬಯಸಿದ ಕೆಲ್ಸ। ಆದೆಂತ ನಂಬಿಕೆ ಅವುಕುಟ್ಟು॥
ತೊಪ್ಪುನ ಮಾಡಿರೆ ಹರಿಕೆನ ಪ್ರತಿಫಲ। ಸಿಕ್ಕಿರೆ ಬಾರಿ ಕಠಿಣುಟ್ಟು
ಬೇಡದ ತೊಪ್ಪುನ ಮಾಡದೆ ಜನಂಗೆ। ಬೆಳ್‌ಸಲಿ ಪ್ರೀತಿ ಒಗ್ಗಟ್ಟ್॥

* * * * *

## ಹನಿಕವನಗ

–ಕುತ್ಯಾಳ ನಾಗಪ್ಪ ಗೌಡ (ಕಿರಣ)

### ಪಾಠ

ಅದ್?
ಕಾಗೆ.
ಇದ್?
ಗೂಗೆ
ಸಂಬಂಧ ಹೇಂಗೆ?
ಎಣ್ಣೆ, ಸೀಗೆ;
ನಮ್ಮ ಹಾಂಗೆ!

### ಮಾತುಕತೆ

"ಕಾಗೆಯ ಮನೆಲಿ ಮಕ್ಕಳ ಬುಟ್ಟ್
ಎಲ್ಲಿಗೆ ಹೊರ್ಟೆ ಕೋಗಿಲವ್ವಾ?"

"ಮಾವಿನ ಮರದ ಚಪ್ಪರದಡಿಲಿ
ಆಯನ ಗಾಯನ ಉಟ್ಟು ಗಡಾ,
ನೀನೂ ಬಾಯಾ ಗುಬ್ಬಕ್ಕಾ!"

### ಕತ್ತೆ ವಾಪಾಸ್ ಬಾತ್!

ಕಟ್ಟ್ ಹೊತ್ತ್ ಕತ್ತೆ ಸುಸ್ತು;
ಕುದ್ರೆ ಆಕೂಂತ ಕಾಶಿಗ್ಹೋತ್.
ಧ್ಯಾನ, ಸ್ನಾನ ಮಾಡಿ ಆತ್;
ಅಲ್ಲಿ ಕೂಡ ಅದೇ ಕೆಲ್ಸ, ಅದೇ ಹೆಸ್ರ್!
ಕತ್ತೆ ವಾಪಾಸ್ ಬಾತ್ !

* * * * *

ಲಲಿತ ಪ್ರಬಂಧಗ :

# ಉಗ್ಗಪ್ಪ ಉಗ್ಗಪ್ಪ... ತೋಟಕ್ಕೆ ಆ.... ಆನೆ ಬಂದುಟು!!

- ಭವಾನಿಶಂಕರ ಅಡ್ತಲೆ

ಇರ್‌ಲ್ ಕೆಂಚು ನಾಯಿನೂ ಬೊಗ್ಗಿ ವೊರ್‍ಯಿನೂ ಬೊಗುಳುದರಂದ ಅಣ್ಣೆ ಅಜ್ಜ ಕಣ್ಣ್‌ಂದ ಕಣ್ಣ್‌ವುಚ್ಚಿತ್ತ್ಲೆ. ಯಾಗೋಳ್‌ನಾಂಗೆ ಮೂರು ಸರ್ತಿ ಕೋಳಿ ಕೂಂಗಿಕಾಕನ ಅಣ್ಣೆ ಅಜ್ಜ ಎದ್ದ್ ನೀರೊಡಿಗೆ ಹೋಗಿ ಮೊಣ್ಣ್‌ನ ಮಂಡೆನ ಅಡೀಲಿ ಮೀದ್ ಒಳ್ದ ನೀರ್‌ನ ಒಣ್ಕ್‌ಲಿ ಬಾಯಿ ಮುಕ್ಕ್‌ಳ್ಸಿ ಉಗ್ದ್, ಮಣ್ಣ್ ಚಿಂಟೆಲಿ ಕುದ್ದೊ. ಹಾಂಗೆ ಅಡ್ಕೆ ಹೋಳ್‌ನ ಎರಡ್ ತೆಗ್ದ್ ಒರ್ಲ್ ಕಲ್ಲ್‌ಲಿ ಹಾಕಿ ಮುಟ್ಟೆಲಿ ಗುದ್ದಿಕಂಡ್ ಅವರಷ್ಟಕ್ಕೆ ಪರ್ಚಿಕೆ ಶುರು ಮಾಡ್ದೊ.

ಹಾಂಗೇ ಒಂದು ನಿದ್ದೆ ಆಗುಟೊ, ಇಲ್ಲೆನೊ.. ಇವರ ಹುಲಿ ಹೊರಿಕೆ ಶುರು ಮಾಡ್ದೊವು ಇನ್ನ್ ನಿಲ್ಸಿತ್ಲೆ ಅದರೊಟ್ಟಿಗೆ ಕಚ್ಚ ಬೀಲ ಕಟ್ಟಿಕಂಡ್ ಕೆಂಚು ನಾಯಿ ಕುಂಯಿಗುಟ್ಟಿದೆ.ಎಂತದೋ ಹಂದಿನೋ, ಕಡ್ವೆನೋ ತೋಟಕೆ ಬಂದುಟು ನಿಘಂಟ್. ಎಲೆ ಅಡ್ಕೆ ಗುದ್ದಿ ಬಾಯಿಗೆ ಹಾಕಿಕಂಡ್ ಅಣ್ಣೆ ಅಜ್ಜ ಚಿಂಟೆಲಿ ಹಾಕಿದ ಮೊಂದ್ರಿನ ಮೊಡ್ಚಿಕೆ ಶುರುಮಾಡ್ದೊ. ಮೊಂದ್ರಿ ಹಾಳಾಕೆ ಬೊತ್ತ್‌ಂತ ಅದರ ಕೆಳಗೆ ಹಾಕಿದ ಬೊಕ್ಕುನ ಗೋಣಿನೂ ಲಾಯಿಕ್‌ಲಿ ಮೊಡ್ಚಿ ಚಿಂಟೆನ ಕರೆಗೆ ಇಸಿ ಅದ್ಕೆ ಒರ್ಗಿ ಕುದ್ದೊ., ಇನ್ನೇನ್ ಪಳ್ಳಾಂಗೆ ಬೊಳ್ಪಾಂಕಂಡ್ ಬಾತ್ ನಾಯಿಗಳ್ದ್ ಈಗ ಸುದ್ದಿನೇ ಇಲ್ಲೆ. ನಾ ಎದ್ದ ಮೇಲೆ ಧೈರ್ಯ ಬಾತಾ. ಅಲ್ಲಾ ಬೊಗುಳಿ ಬೊಗುಳಿ ಬೊಬ್ಬೆ ಹೋತಾ? ಅಂತೂ ಅವರ ದೊಂಡೆ ಈಗ ಕಟ್ಟಿತ್ ಕಂಡದೆ. ಉಗ್ಗಪ್ಪ ಅವರಷ್ಟಕೆ ಮಾತಾಡಿಕಂಡೇ ಇದ್ದೊ.

ಒಮ್ಮೆ ಎಲೆ ಅಡ್ಕೆ ತಿಂದ್ ಆಗಿ ಅಡ್ಗೆ ಒಳಗೆ ಹೋಗಿ ಎರಡ್ ಕೊಳ್ಳಿ ಕೂಡಿ, ಕೀಜಿ ಮಡ್ಕೆಲಿ ಒಂದು ಪಾತೆ ಇಸಿ ಮಡ್ಲಿಲಿ ಕಿಚ್ಚಿ ಹೊತ್ಸಿಕೆ ಶುರು ಮಾಡ್ದೊ. ಅಣ್ಣೆ ಅಜ್ಜ ಒಳಗೆ ಮಲ್ಗಿದೊವು ಈಗಳೂ ಗೂರಿಕಂಡೇ ಒಳೊ. ಅವ್ಕೆ ತೋಟಕೆ ಹಂದಿ ಅಲ್ಲ ಆನೆ ಬಂದರೂ ಗೊತ್ತಾಕಿಲೆ. ಇವು ಮಲಗಿದ ಮೇಲೆ ಜೀವ ಬರಕೊರೆ ಬಿಸಿಲ್ ಬೊಡೆಕು. ಕತ್ತಲೆಗೆ ಬೇಗ ಮಲ್ಗಿಕಿಲೆ. ಆ ಟೀವಿನ ನೋಡಿಕಂಡ್ ನಗಾಡ್ದು. ಮರ್ದುದು ಎಲ್ಲಾ ಮಾಡ್ದು ಬೊಳ್ಪಿಗೆ. ಬೊಳ್ಪಿಗೆ ಗಂಟೆ ಏಳ್ ಆದರೂ ಕರ್ದ್ ಎದ್ರುಸೊಕು. ನಮ್ಮ ಕಾಲಲಿ ದನ ಕೂಡುವ ಹೊತ್ತ್‌ಗೆ ಮಲ್ಗಿರೆ ಕೋಳಿ ಕೂಂಗುವ ಹೊತ್ತಿಗೆ ಎದ್ರುವೊ. ಮನೆ ಹೆಣ್ಮಕ್ಕ ಬತ್ತ ಮಿಜ್ಯೊದು. ಅಕ್ಕಿ ಕಡ್ಯೊದು ಎಲ್ಲಾ ಮಡ್ದೊ. ಈಗನೊವುಕೆ ಸೌಕರ್ಯ ಗಂಡ್‌ಗ ಹೆಣ್ಮಕ್ಕ, ಮಕ್ಕ ಎಲ್ಲವೂ

ಒಂದೇ. ಅಜ್ಜನ ಕಣ್ಣ ಚಾ ರೆಡಿ ಆಗಿ ಒಂದು ಗೇಣ್ ಉದ್ದ ಕುಪ್ಪಿ ಗ್ಲಾಸ್‌ನೂ ಒಂದು ಪಾತೆ ಚಾನೂ ತಂದ್ ಮಣ್ಣ್ ಚಿಂಟೆಲಿ ಗ್ಲಾಸಿಗೆ ಹೊಯ್ದ್ ಕುಡ್ಯಕೆ ಶುರು ಮಾಡ್ದೊ.

ಇಂದ್ ಏನೋ ನಮ್ಮಂವ ಬೊಳ್ಪಿಗೆ ಬೇಗ ಎದ್ದಾಂಗೆ ಹಲ್ಲುಜ್ಜುವ ಕಡ್ಡಿಗೆ ಎಂತದೋ ಬೆಳ್ಳಂಗೆ ಮೆತ್ತಿಕಂಡ್ ನೀರೊಡಿ ಕಡೆಗೆ ಹೋತ್, ಐದ್ ನಿಮಿಷ ಹಲ್ಲುಜ್ಜಿ, ನಾಯಿಗಳ ಕರ್ಕಂಡ್ ಜೋಡ್ ಸಿಕ್ಕಿಸಿಕಂಡ್ ತೋಟಕೆ ಓಡ್ತ್. ಹೋ ಇಂವ ಇಂದ್ ಕೂಡಾ ನಿಲ್ಲಿಗ್ತ್ಲೆ ಕಂಡದೆ. ಗ್ರಹಸಿಕಾಕನನೇ ಮಕ್ಕ ಇಬ್ಬರ್ ಅವನೊಟ್ಟಿಗೆ ಓಡ್ದೊ. ಓ ಎಲ್ಲವುಕೆ ಒಳ್ಳ ಬುದ್ದಿ ದೇವ್ರು ಕೊಟ್ಟೊಳೊಂತ ಅಜ್ಜ ಮನ್ಸಲೆ ನೆನ್ಸಿಕಂಡೊ.

ಅಬ್ಬಾ ಚಾ ಕುಡ್ದ್ ಆಗಿ ಗ್ಲಾಸ್, ಪಾತೆನ ತೊಳ್ದ್ ಒಳಗೆ ಹಲಗೆಲಿ ಕಂಕಣಿ ಹಾಕಿ ಹೊರಗೆ ಬಂದ್ ಹಿಂದಕ್ಕೆ ಎಲೆ ಅಡ್ಕೆ ಒರ್ಲಿಲಿ ಗುದ್ದಿಕೆ ಶುರು ಮಾಡ್ದೊ. ಅಷ್ಟೊತ್ತಿಗೆ ಮಕ್ಕ ಸೇಂಕಂಡ್ ಬುಕ್ಕಂಡ್ ಒಡಿ ಬಂದೊ ಉಗ್ಗಪ್ಪ ಉಗ್ಗಪ್ಪ ತೋಟಕೆ ಆ ಆನೆ ಬಂದುಟು..! ದೊಡ್ಡಂವ ಉಸುರು ತಕಣದೆ ಹೇಳ್ತಾ ಉಟ್ಟು. ಸಣ್ಣಂವ ಪಿಳಿ ಪಿಳಿ ಕಣ್ಣ್ ಹೊರ್ಡಿಸಿ ಅಜ್ಜನನೇ ನೋಡ್ತಾವುಟ್ಟು. ಅಜ್ಜ ಒಮ್ಮೆ ಮಕ್ಕಳ ನೋಡಿ ಆನೆ..! ಆನೆ ಬರದೆ ಎಷ್ಟ್ ಕಾಲ ಆತೋ!ಏನೋ?? ನೀವು ಎಂತರ ನೋಡಿಕಂಡ್ ಹೇಳ್ದೊ ನೀವ್ಗೆ ಗೊತ್ತು. ಅಲ್ಲ ಉಗ್ಗಪ್ಪ ಬಂದುಟು ಆನೆ.! ಮಕ್ಕ ಇಬ್ಬರೂ ಒಟ್ಟಿಗೆ ಹೇಳ್ದೊ. ಬಂದ್ ಬಾಳೆನೆಲ್ಲಾ ಮುರ್ದು ಹಾಕಿಟು. ಅಲ್ಲ ಅದ್ ಆನೇಂತ ಹೇಂಗೆ ಹೇಳ್ರೆ ಮಕ್ಕಳೇ. ಕಾಟಿನೋ, ಕಡ್ಡವೇನೋ ಆಗಿರ್ದಲ್ಲಾ!? ಅಲ್ಲ ಉಗ್ಗಪ್ಪ ನಾವು ಅಪ್ಪನೊಟ್ಟಿಗೆ ತೋಟಕ್ಕೆ ಹೋದನೋ ನಮ್ಮೊಟ್ಟಿಗೆ ಕೆಂಜು ನಾಯಿನೂ, ಬೊಗ್ಗಿ ಮ್ಯೊರಿನೂ ಇತ್ತಲ್ಲಾ ಬೊಗ್ಗಿ ನಾಯಿ ಹುಚ್ಚ್ ಹಿಡ್ದಾಂಗೆ ಎಲ್ಯಾಲ್ಲಾ ಓಡ್ತಿತ್ತ್. ಆದರೆ ಕೆಂಜು ನಾಯಿ ಮಾತ್ರ ಕುಂಯಿಗುಟ್ಟಿಕಂಡ್ ಕಚ್ಚ ಬೀಲ ಕಟ್ಟಿ ನಮ್ಮ ಹಿಂದೆಂದ ಎಡಂಗರಸೆರೆಗೆ ಹುಗ್ಗಿಕೆ ನೋಡ್ತಿತ್ತ್ ಹಾಂಗೆ ಮೇಲೆ ತೋಟ ಬಾಳೆ ಹಾಕಿದ ಗದ್ದೆಗೆ ಇಳೆಕಾಕನ ಕೆಂಜು ನಾಯಿ ಒಮ್ಮೆಗೆ ಒಂದಾಳ್ ಎತ್ತರ ಕುತ್ತ ಹಾರಿ ಬೀತ್. ನಾವಿಬ್ರೂ ಒಟ್ಟಿಗೆ ಆರ್ಭಟೆ ಕೊಟ್ಟೊ. ಅಪ್ಪ ಅಲ್ಲಿ ಎಂತ ಉಟ್ಟುಂತ ಹೋಗಿ ನೋಡಿರೆ ಒಂದ್ ಹೆಡೆಗೆ ಆನೆ ಲಡ್ಡಿ ಬಿದ್ದ್ ಕಂಡ್ ಇತ್ತ್ ಅದರ್ಲಿ ಹೊಗೆ ಹೋಗ್ತಿತ್ತ್ ಬೊಳ್ಪಿಗೆ ಹೋಕೆ ಆಕನ ಹಾಕಿದ್ ಕಂಡದೆ. ಅಪ್ಪಂಗೂ ಒಮ್ಮೆ ಹೆದ್ರಿಕೆ ಆವ್ಟು. ಅಲ್ಲೇ ಬಿದ್ದ್ ಕಂಡ್ ಇದ್ದ ಕೊತ್ತೊಳಿಕೆ ತುಂಡುಂದ ನಾಯಿಗೆ ಒಂದ್ ಕೊಟ್ಟ್ ಹೇಳ್ದೊ ಮುಂದೆನೇ ಹೆದ್ರಿಕಂಡ್ ಓಳದ್ ಇದರ ಹುಲಿ ತಿಂಬಕೆ ಯಾರ್ಯಾರ ಹೆದ್ರಿಸಿ ಕೊಲ್ಲುದು ಇಂತ ಪುಕ್ಕ ನಾಯಿಗೆಲ್ಲ ಬೊದ್ಕಿಕೆ ಆಗದಂತ ಹೇಳಿಕಂಡೊ. ನಾಯಿ ಒಮ್ಮೆ ಕುಂಯಿಂತೇಳಿ ನಮ್ಮ ಹಿಂದೆನೇ ನಿತ್ತತ್ ಪಾಪ.. ಅದರ ಕಾಲ್ ಇನ್ನು ದೆರ್ಪುದು ನಿತ್ತ್ತಲ್ಲೆ ಅಲ್ಲ ಮಾರಾಯ ಆನೆ ಬಂದುಟುಂತೇಳಿ ನಾಯಿ ಕತೆ ಹೇಳ್ತಾ ವೊಳೊರಿಯಲ್ಲಾ..? ಆನೆ ಬಂದ್ ಎಂತಾತ್.

ಉಗ್ಗಪ್ಪ ಆನೆ ಬಂದ್ ನಮ್ಮ ನೇಂದ್ರ ಬಾಳೆ ಗೊನೆ ಹಾಕಿಕಂಡಿದ್ದ ಹಾಕಿಕೆ ಆದ ಸುಮಾರ್ ನೂರು ನೂರೈವತ್ತ್ ಬುಡ ಬಾಳೆನ ಮುರ್ದ್ ಹಾಕಿಟು. ಅದರ ನೋಡಿಕೆ ಬೊತ್ತ್ ಹಾಂಗೆ ಎರಡ್ ಮೂರು ಚಾಳೆ ದೈಯಿಗಳ ಅದರೊಟ್ಟಿಗೆ ಒಂದು ಎರಡ್ ಕೊಮ್ಮುಗಳ ಎಲ್ಲಾ ಮುರ್ದು ಹಾಕಿಟು. ಹೆಚ್ಚನಂಶ ಅದ್ ಹೆಣ್ಣಾನೆ ಆಗಿರೊಕು. ಅದರೊಟ್ಟಿಗೆ ಒಂದು ಮೊರಿನೂ ಇದ್ದಿರೊಕು. ಒಂದ್‌ರ ಹೆಜ್ಜೆ ನಮ್ಮ ಒರ್‌ಲ್

ಕಲ್ಲ್‌ನಷ್ಟೇ ಅಗಲ ಕಂಡದೆ .ಅಪ್ಪ. ಇನ್ನ್ ಹತ್ತಿಪ್ಪತ್ತ್ ದಿನಲಿ ಕಡೆಕಾದ ಗೊನೆನೆಲ್ಲಾ ಹಾಳ್ ಮಾಡ್ತಲ್ಲಾಂತ ತಲೆಗೆ ಕೈ ಹೊತ್ತ್ ಕುದೊಳೊ.

ಅಲ್ಲಾ ಎಷ್ಟೊ ವರ್ಷಂಗಳ್‌ಂದ ಈ ಬೈಲ್‌ಗೆ ಆನೆ ಬರದೆ ಆತ್. ಈಗ ಯಾಕೆ ಬಂದೊ ಅಜ್ಜ ಮನ್ಸಲೇ ನೆನ್ಸಿಕಂಡೊ. ಉಗ್ಗಪ್ಪ ಇಲ್ಲಿಗೆ ಈ ಹಿಂದೆ ಆನೆಗ ಬಾತಿತ್ಲೆನಾ? ನೀವು ಆನೆಗಳ ನೋಡ್ಯೆಳೊರಿಯಾ? ದೊಡ್ಡ ಪಿಳ್ಳಿ ಕೇಳ್ತ್.

ಆನೆಗ ಹಿಂದೆ ಬಾತಿದ್ದೊ ಮಂಞ ಆಗ ಈಗನಾಂಗೆ ಬೇಸಾಯ ಮಾಡಿಕಂಡ್ ಇರ್ತಿದ್ದೊ. ಕಟ್ಟ ಪುಣಿಗಲ್ಲಿ ಬಾಳೆಗ ಇರ್ತಿದ್ದೊ. ಆಗ ನಾವು ಕುಮೇರಿ ಕೂಡಾ ಮಾಡ್ತಿದ್ದೊ. ಕುಮೇರಿ ತೇಳಿರೆ ಎಂತ ಉಗ್ಗಪ್ಪ? ಸಣ್ಣ ಪಿಳ್ಳಿ ಕೇಳ್ತ್ ಕುಮೇರಿ ತೇಳಿರೆ ಗುಡ್ಡೆಗಲ್ಲಿ ಕಾಡ್ ಬೆದ್‌ರ್, ಬಲ್ಲೆಗಳೆಲ್ಲ ಕಡ್ದ್ ಕಿಚ್ಚಿ ಹಾಕಿ, ಮಳೆ ಬೀತ್ ತೇಳಿಕಾಕನ ಪೊಣ್ಣೋಳ್‌ಲಿ ಪರ್ಚಿ ಬಿತ್ತ್‌ನ ಬಿತ್ತ್ ಹಾಕುದು. ಮಳೆಗಾಲಲಿ ಒಂದು ಬೆಳೆ ಲಾಯಿಕಿಲಿ ಕುಮೇರಿಲಿ ತೆಗೆಕೆ ಆತಿತ್ತ್. ಅದರೊಟ್ಟಿಗೆ ನೀರ್ ಸೋಂತೆ, ರಾಗಿ, ನವಣೆ ಎಲ್ಲಾ ಬಿತ್ತ್ತಿದ್ದೊ. ಈ ಕಾಡ್ ಹೊತ್ತಿ ಕುಮೇರಿ ಒಳ್ಳ ಚೂಟು ಮಣ್ಣ್‌ನಾಂಗೆ ಆಗಿ ಒಳ್ಳೆ ಬೆಳೆ ಬಾತಿತ್ತ್. ಪಣ್ಣೋಳ್ ತೇಳಿರೆ ಎಂತ ಉಗ್ಗಪ್ಪ? ಹಿಂದಕೆ ಸಣ್ಣ ಪಿಳ್ಳೀ ಕೇಳ್ತ್. ಅಯ್ಯೋ ಮಾರಾಯ ಇನ್ನ್‌ನ ಮಕ್ಕಳಿಗೆ ಈ ಪಣ್ಣೊಳು, ನೇಗ್‌ಲಂತೇಳ್ರೆ ಎಂತ ಗೊತ್ತ್ಲೆ. ಪಣೋಳುಂತೇಳ್ರೆ ನೇಗ್‌ಲ್ ನ ಕೊಡಿಗೆ ಹೊಡಿವ ಕಬ್ಬಣದ ಒಂದು ಬ್ಲೇಡ್‌ನಾಂಗೆ ಇರುವ ಸಾಮಾನ್ ಅದ್ ಗದ್ದೆಲಿ ಹೂಡಿ, ಹೂಡಿ ಸಣ್ಣದಾದರ ನಾವು ಕೈ ಉದ್ದದ ಬೆದ್‌ರ್‌ಗೆ ಓರೆ ಹಾಕಿ ,ನೆಲ ಪರ್ಡಿಕೆ ಬಾರಿ ಲಾಯ್ಕಿ ಆದೆ. ಅದರ್ಲೆ ಕುಮೇರಿ ಮಾಡುವ ಟೈಮುಲಿ ದೊಡ್ಡ ದೊಡ್ಡ ಬದ್‌ರ್ ಹಿಂಡ್ಲ್‌ಗಲ್ಲಿ ಹಿಂಕ್‌ಲ್ ಕಡ್ದ್ ಮೇಲೆ ಎತ್ತರಲಿ ಮಾಡುಕೋಲು ಮಾಡ್ತಿದ್ದೊ. ಮಾಡುಕೋಲು ತೇಳಿರೆ ಅದ್ ಹೇಂಗೆ ಉಗ್ಗಪ್ಪ? ಈಗ ದೊಡ್ಡಂವ ಕೇಳ್ತ್. ಬೆದ್ರ್ ಹಿಂಡ್ಲಲಿ ಲಾಯಿಕ್ ಕಡ್ದ್ ಸಣ್ಣ ಮನೆನಾಂಗೆ ಮಾಡ್ದು. ಆನೆ ಬಂದರೆ ನಾವು ಎತ್ತಿಕಿಲೆ. ಮತ್ತೆ ದೂರಂದಲೇ ಕಂಡದೆಲ್ಲ? ಅದರೊಟ್ಟಿಗೆ ನಾವು ಅಂಡಟೆ ಹೊಡೆತಿದ್ದೊ. ಅಂಡಟೆ ತೇಳಿರೆ ಅದ್ ಹೇಂಗೆ ಉಗ್ಗಪ್ಪ? ಅಯ್ಯೋ ದೇವ್ರೆ ಹಿಂದೆನ ಕಥೆನ ಈಗನ ಮಕ್ಕಳಿಗೆ ಹೇಳ್ರೆ ನಾ ಮೂರು ಸರ್ತಿ ಉಂಡ್‌ಕಣಕಾದು.

ಈಗನ ಮಕ್ಳಿಗೆ ಟಿ.ವಿ., ಮೊಬೈಲ್ ಬುಟ್ಟರೆ ಬೇರೆ ಎಂತದ್ ಗೊತ್ತ್ಲೆ. ಅಂಡಟೆ ತೇಳಿರೆ ಒಳ್ಳ ತೋರದ ಬೆದ್‌ರ್‌ನ ಎರಡ್ ಗಂಟ್ ತಕಂಡ್ ಅದರ ಒಟ್ಟೆ ಮಾಡಿ ಸಪೂರಲಿ ಒಂದ್ ಗಂಟ್‌ಂದ ಇನ್ನೊಂದು ಗಂಟಿಗೆ ಮಳ್ಳೆ ತೆಗ್ಯಕು. ಎರ್ಡು ಕಡೆ ತ್ರಿಭುಜಲಿ ಅದರ ಒಟ್ಟೆ ಮಾಡೋಕ್. ಅದರ ಸೈಡಿಗೆ ಹೋಡ್ದರೆ ಒಳ್ಳೆ ಚೆಂಡೆನಾಂಗೆ ಕೇಳ್ದೆ. ನಾವು ಕೂಡಾ ಪ್ರಾಣಿಗಳ ಹೀಂಗೆ ಮಾಡಾಕೋಲ್‌ಲಿ ಕುದ್ದಕಂಡ್ ಓಡ್ಸುತ್ತಿದ್ದೊ.

ಈಗ ಹಾಂಗೆ ಮಾಡಿರೆ ಹೇಂಗೆ ಉಗ್ಗಪ್ಪ! ಸಣ್ಣ ಪಿಳ್ಳಿ ಕೇಳ್ತ್? ಈಗ ಯಾರ್ ಮಾಡ್‌ಕೋಲುಲಿ ಕುದ್ರುದು. ನೀನೋ ಅಲ್ಲ ನಿನ್ನ ಅಪ್ಪನೋ? ಒಳಗೆ ಹುಕ್ಕ್ ಪ್ಯಾನ್ ಹಾಕಿ, ಒಲ್ಲಿ ಹೊದ್ದ್ 7 ಗಂಟೆ ಮುಟ್ಟ ಗುರಿಕಂಡ್ ನಿಲ್ಗವ್ಕೆ ಮಾಡ್‌ಕೋಲು, ಅಂಡಟೆ ಎಲ್ಲ ಅದೆನೋ? ಹಾಂಗೆ ಮಾಡಿಕೆ ಈಗ ಕುಮೇರಿ ಉಟ್ಬೋ? ಈ ಕಾಲಲಿ ಅದರ ಮಾಡಿಕೆ ಹೊರ್ಪ್ಪರೆ ಮೊನ್ನೆ ಮುಟ್ಟ ಅಂವ ಸರಿ ಇತ್ತ್. ಈಗ ಪಾಪ ಹಂಞ ತಲೆ ಕೆಟ್ಟುಟು ಕಂಡದೆಂತರ ಜನಂಗ ನೆಗಾಡವೊ. ಮತ್ತೆ ಹೇಂಗೆ ಉಗ್ಗಪ್ಪ ಆನೆ ಬರದಾಂಗೆ

ಮಾಡ್ದು? ಈ ಬಾಳೆ ಎಲ್ಲ ಮುರ್ದದಕೆ ಪೋರೆಸ್ಟ್‌ನವು ಪರಿಹಾರ ಕೊಟ್ಟವೇಂತ ಅಪ್ಪ ಹೇಳ್ತಾ ಇದ್ದೊ.

ಹುಂ! ಪರಿಹಾರ ಅಲ್ಲದಿದ್ರೂ "ಪರಿಯರ" ತಕ್ಕ ಕೊಡುವೊ. ಅದ್ರೆ ಅದ್ಕೆ ಅಷ್ಟೇ ಸರ್ತಿ ರೇಂಜ್ ಆಫೀಸ್‌ಗೆ ಪೊರೆಸ್ಟ್‌ನವರಕ್ಕಲೆ ಕೊಣೆಕಾದು. ಅವರ ಕರ್ಕಂಡ್ ಬರೋಕು. ಜೇಮ ಮಾಡೊಕು, ಆನೆ ಹೆಜ್ಜೆನ ಅಳ್ತೆ ಮಾಡೋಕು. ಎಲ್ಲಾ ಬರ್ದ್ ಕಳ್ಸಿರೆ ಇನ್ನೊಮ್ಮೆ ಬಾಳೆ ನೆಡಿಕೆ ತಕ್ ಸಿಕ್ಕುದೆನೋ. ಅಲ್ಲ ಉಗ್ಗಪ್ಪ. ಈಗ ಆನೆಗ ಅಲ್ಲಲ್ಲಿ ಬಾಕೆ ಶುರು ಮಾಡ್ಯೊಳೋ ಗಡ. ಪೇಪರ್‌ಲ್ಲಿ, ಟಿ.ವಿ.ಲಿ ಬಂದದೆ. ನಮ್ಮಲ್ಲಿ ಎಂತಾ, ಬೆಂಗಳೂರು ಪೇಟೆಲ್ಲೆ.. ಹೋಗ್ತಾ ಉಟ್ಟು ಗಡ ಕೊಡಗ್‌ಲಿ ಕಾಫಿ ಏಲಕ್ಕಿ ತೋಟಕ್ಕೆ ಎಲ್ಲ ಬಂದವೇ ಗಡ. ಇತ್ತೀಚೆಗೆ ಆನೆಗಳಗೆ ಸಿಕ್ಕಿ ಸುಮಾರು ಜನ ಸತ್ತೋ ಗಡ.

ಹೌದು ಮಾರಾಯ, ಕಾಡ್‌ಲಿ ಎನೂ ತಿಂಬಕೆ ಇತ್ತ್‌ಲರೆ ಆನೆಗ ಪೇಟೆಗ ಬರದೆ ಮತ್ತೆಂತ ಮಾಡ್ದು? ಆನೆಗ ಮಾತ್ರ ಅಲ್ಲ, ನಿನ್ನ ಅಪ್ಪ ಇರ್‍ಲ್ ಮನೆಗೆ ಬಾಕ್ಯಕನ ರೋಡ್‌ಗಳ್ಲಿ ಕಾಟಿ, ಕಡ್ಡವೆ, ಕೆಂಪಂಗ, ಸಾರೆಂಙ, ಹುಲಿ ಎಲ್ಲ ಸಿಕ್ಕುವೆಂತ ಹೇಳ್ತ್. ಒಂದು ಕಡೆ ಪ್ರಾಣಿಗಳ ಕೊಲ್ಲಿಕೆ ಬೊತ್ತುಂತ ಸರ್ಕಾರದ ಕಾನೂನ್, ಇನ್ನ್ ಪ್ರಾಣಿಗಳೇ ಹೆಚ್ಚ್ ಆಕಕನ ಜನಂಗ ಕಾಡಿಗೆ ಓಡುವ ಪರಿಸ್ಥಿತಿ. ಮುಂದೆಲ್ಲ ಕಾಡು ಪ್ರಾಣಿಗ ಬೆಳೆ ಹಾಳ್ ಮಾಡಿರೆ ಅವರ ಕೊಲ್ಲಿಕೆ ಸರ್ಕಾರ ಆರ್ಡರ್ ಮಾಡ್ತಿತ್ತ್. ಹಾಂಗಾಗಿ ಬಡ್ಡಡ್ಕ ಅಪ್ಪಯ್ಯ ಗೌಡ್ರು, ಕೆದಂಬಾಡಿ ಜತ್ತಪ್ಪ ರೈ ಗ ಎಲ್ಲಾ ನೂರಾರು ಹುಲಿಗಳ, ಕಾಡ್ ಪ್ರಾಣಿಗಳ ಕೊಂದ್ ದೊಡ್ಡ ಹೆಸ್ರ್ ಮಾಡ್ಯೋಳೊ.

ಅವರ ಕಥೆಗ ಈಗ ಪುಸ್ತಕಗಲ್ಲಿ ಓದಿ ಸಿಕ್ಕಿದೆ. ಈಗ ಕೊಂದರೆ ಅವಂಗೆ ಜೈಲೇ ಗತಿ. ಕೃಷಿಕರಿಗೆ ಬೆಳೆ ರಕ್ಷಣೆಗೆಂತ ಸರ್ಕಾರ ಬೆಡಿಗೆ ಲೈಸೆನ್ಸ್ ಕೊಟ್ಟವೆ. ಆದ್ರೆ ಪ್ರಾಣಿಗಳ ಕೊಂದರೆ ಕೇಸ್, ಮನ್ಸರಿಗೆ ಹೊಡ್ಡರೆ ಜೈಲ್. ಇನ್ನ್ ಅದ್ ಯಾರಿಗೆ ಹೊಡ್ಯಕೆ ಗೊತ್ತೆ. ನಮ್ಮಲ್ಲಿ ಕೂಡಾ ಒಂದು ಉಟ್ಟು ನೋಡಿ ಮಣ್ಣ್ ಹಿಡ್ಕಂಡ್ ಮೂಲೇಲಿ ಕುದ್ದುಟು. ಓಟು ಬಾಕೆಕನ ಒಮ್ಮೆ ಎಲ್ಲವೂ ಸುಳ್ಯ ಪೇಟೆಲಿ ಹಿಡ್ಕಂಡ್ ಹೋದವೆ. ಬೆಡಿ ಉಟ್ಟುಂತ ತೋರ್ಸಿಕೆ.

ಅಲ್ಲ ಉಗ್ಗಪ್ಪ ಈಗ ಆನೆಗ ಬಾರದಂಗೆ ಎಂತ ಮಾಡ್ದು ಹೇಳಿ?.. ಮಕ್ಕ ಕೇಳಿಕೆ ಶುರು ಮಾಡ್ದೊ. ಆನೆಗ ಬರದಾಂಗೆ ನಮ್ಮ ಸರ್ಕಾರದವ್ಕೆ ಮಾಡಿಕೆ ಆಕಿಲೆ. ಯಾಕೆಂತೇಳಿರೆ ಹಿಂದೆಲ್ಲಾ ಆನೆಗಳಿಗೆ ಕಾಡ್‌ಲಿ ತಿಂಬಕೆ ಬೇಕಾದಷ್ಟ್ ಬೆದ್ರ್‌ಗ, ಓಟೆಗ ಇರ್ತಿತ್. ಕುಡ್ಯಕೆ ನೀರುನೂ ಇರ್ತಿತ್. ಈಗ ಬೆದ್ರ್, ಹಣ್ಣ್‌ನ ಮರಗ ಕಡ್‌ಲಿದ್ದವು ನಾಶ ಆಗಟು. ವಾಪಾಸ್ ನೆಡೋವು ಇಲ್ಲೆ. ಹಿಂದೆ ಗಾರ್ಡ್‌ಗ, ಪೋರೆಸ್ಟ್‌ಗ ಕತ್ತಿ ಹಿಡ್ಕಂಡ್ ಕಾಡಲಿ ತಿರ್ಗುವೊ. ಈಗ ಬೈಕ್ ಹಿಡ್ಕಂಡ್ ರೋಡ್‌ಲಿ ಹೋದವೆ. ಎಲ್ಯಾರ್ರ್ ಅಂಗಡಿಲಿ ಕುದ್ದ್ ಯಾರ್‍ಯಾರ್ ಮರ ಕದ್ದೊಳೊಂತ ಕೇಳಿ ಹೋದವೆ. ಈಗ ಪಾರೆಸ್ಟ್‌ನೊವು ಮರಗಳ ಕಾಡ್‌ಲಿ ನೆಡುವ ಬದಲ್, ರೋಡ್ ಸೈಡಿಲಿ ನೆಡಿಕೆ ಶುರು ಮಾಡ್ಯೊಳೆ. ಹಲ್ಸ್, ಹೆಬ್ಬಲ್ಸ್ ಎಲ್ಲಾ ರೋಡ್ ಸೈಡ್‌ಲಿ ನೆಟ್ಟರೆ, ಇನ್ನ್ ಆನೆಗ ತಿಂಬಕೆ ರೋಡ್‌ಗೆ ಬರದೆ ಮತ್ತೇನ್ ಮಾಡ್ದು? ಕಾಡ್ ಜನಂಗಳಿಗೆ ಕಾಂಬಕೆ ಬೇಕಾಗಿ ಸಾಮಾಜಿಕ ಅರಣ್ಯ ಆಗುಟು. ಅರಣ್ಯ ಇಲಾಖೆವು ಕೆಲ್ಸ ಮಾಡ್ದು ಜನಂಗಳಿಗೆ ಕಾಣೊಕಲ್ಲಾ?

ಕಾಡ್‌ಲಿ ಹೋಗಿ ಬೆದ್ರ್, ಓಟೆ, ಹಣ್ಣಿನ ಮರಗಳ ನೆಟ್ಟ್ ಬೆಳ್ಸಿರೆ ಅದರ ಪ್ರಾಣಿಗ ತಿಂದ್‌ಕಂಡ್ ಕಾಡ್‌ಲೇ ನೀರ್ ಬೇಕಷ್ಟ್ ಇದ್ದರೆ ಅದರ ಕಟ್ಟ ಕಟ್ಟಿ ಅವ್ಕೆ ಕುದಕೆ ಬೇಕಾದಂಗೆ ವ್ಯವಸ್ಥೆ ಮಾಡಿರೆ ಆದು. ಇದೆಲ್ಲಾ ಯಾರಿಗೆ ಅರ್ಥ ಆದೆ? ನಮ್ಮ ಆಳುವವಂಗೆ ಎ.ಸಿ ರೂಮ್‌ಲಿ ಕುದ್ದಂಡ್ ಅವನ ಹೊಟ್ಟೆ ಬೆಳ್ಸಿರೆ ಸಾಕ್. ಪಾಪದಂವ ಹಾಳಾದರೆ ಅವಂಗೇನ್? ಈಗ ನೋಡಿ ಬಾಳೆಲಿ ಒಂದ್ ಬೆಂಡಸದ ಕರ್ಕ್ ಇಲ್ಲೆ. ಪೂರಾ ಕುರೆಗ ಒಟ್ಟೆ ಮಾಡಿ ಕುದ್ದವೆ. ತೋಟಲಿ ಕೊಕ್ಕೋ ಆಗಲಿ, ಬಾಳೆಗೊನೆ ಆಗಲಿ ಕುರೆಗ ಪಾಂಜಂಗ, ಕುಂಡತಂಗ ಇಸುದುಲೆ. ಇದರೆಲ್ಲಾ ಯಾರೊಟ್ಟಿಗೆ ಹೇಳ್ದು? ಕಲ್ತದ್ ಜಾಸ್ತಿ ಆದರೆ ಹಿಂಗೆ ಆದು. ಎಲ್ಲವೂ ಅವು ಬೊದ್ಕಿಕ್ಕೆ ನೋಡ್ದ್ ಹೊರ್ತು ಜನಗಳಿಗೆ ಒಳೆದಾಗಲಿಂತ ನೋಡಂವ ಯಾರು ಇಲ್ಲೆ. ಎಲ್ಲಿ ತಿಂಬಕೆ ಸಿಕ್ಕಿದೆ, ಎಲ್ಲಿ ನೆಕ್ಕಿಕೆ ಸಿಕ್ಕಿದೇಂತ ನೋಡಂವನೇ ಜಾಸ್ತಿ.

ಅಲ್ಲ ಉಗ್ಗಪ್ಪ ಆನೆಂಗ ಬರದಾಂಗೆ ಕಡಂಗ, ಬೇಲಿ ಎಲ್ಲಾ ಮಾಡಿಕಾದುಲೆನಾ? ಆದೆ ಮಾರಾಯ. ಅದೇ ಹೇಳ್ದ್ ಅಲ್ಲಾ?.. ಕಡಂಗ ಮಾಡ್ರೆ ಒಂದೇ ವರ್ಷ. ಅದರ ಸಹ ಸರಿಯಾಗಿ ಪ್ಲಾನ್‌ಲಿ ಮಾಡ್ದುಲೆ. ಎರಡ್ನೆ ವರ್ಷಕ್ಕೆ ಆನೆಗ ಬುಡು ಕಾಡಿನೂ ಹತ್ತಿಕಂಡ್ ಬಂದವೆ. ಇನ್ನು ಬೇಲಿನ ಬಗ್ಗೆ ನಮ್ಮ ಉಸ್ತುವಾರಿ ಮಂತ್ರಿಗ ಯೋಜನ ಮಾಡ್ಯೋಳೊಂತ ನಿನ್ನ ಅಪ್ಪ ಹೇಳ್ತಿತ್ತ್. ಹಾಂಗೆ ಕರೆಂಟ್ ಬೇಲಿ ಉಟ್ಟುಗಡ. ಅದರ ಅರ್ಧ ದುಡ್ಡು ನಾವೆ ಹಾಕೊಕಡ. ಎರ್ಡು ಲಕ್ಷ ಖರ್ಚು ಆದರೆ ಅರ್ಧಾಂಶ ನಾವು ಹಾಕೊಕಗಡ. ಕೆಲವು ಕಡೆ ಉಂಬಕೆ ಸರಿ ಎತ್ತದವು ಬೇಲಿಗೆ ಎಲ್ಲಿಂದ ದುಡ್ಡು ಹಾಕುದು? ಇದೇ ಸುಮ್ಮನೆ ನಾಟಕಯ. ರೆಕಾರ್ಡ್‌ಗಲ್ಲಿ ಬೇಲಿ ಆಗಿದ್ದದೆ. ದುಡ್ಡು ಬೇಕಾದಂವ ಬೇಕಾದಂಗೆ ಮಾಡ್ದೆ. ಎಲ್ಯಾರ್ ಸರ್ಕಾರ ಒಳ್ಳದ್‌ಕೆಂತ ಉಪಯೋಗ ಮಾಡ್ದ್ ಉಟ್ಟಾ? ನಮ್ಮಲ್ಲೇ ನೋಡು, ಆನೆ ಕಡಂಗ ಮಾಡ್ಯೊಳೊ. ನಮ್ಮ ಎದ್ರಿಕೆ ಬೊತ್ತದ ಎತ್ತು ಕೂಡಾ ಅದ್ರಲ್ಲಿ ದಾಟಿ ಬಂದದೆ. ಇದೆಲ್ಲಾ ಸರ್ಕಾರದ ಕೆಲ್ಸ!!. ಅಂದ್ರೆ ಇದ್ಕೆ ಪರಿಹಾರ ಇಲ್ಲೆನಾ ಉಗ್ಗಪ್ಪ?

ಪರಿಹಾರ ಉಟ್ಟು ಅಲ್ಲಿ ಎಸಿ ರೂಮಾಲಿ ಕುದ್ದುಕಂಡ್ ಮೀಟಿಂಗ್ ಮಾಡುವೆ ಅಲಾ.. ಅವರೊಟ್ಟಿಗೆ ನಿಜವಾಗಿ ಕಷ್ಟ ಬರಂವ, ನಿಜವಾದ ಸಮಸ್ಯೆ ಗೊತ್ತಿದ್ದಂವನ ಕರ್‍ಕೊಂಡು ಹೋಗಿ ಮಾತಾಡೊಕು. ಪರಿಹಾರ ಮಾಡಕೆ ಆದೆ ದಟ್ಟ ಕಾಡ್‌ಗಲ್ಲಿ ಬೆದ್ರ ಬೆಳ್ಸುದು ಹಣ್ಣು ಹಂಪಲ್ ಮರಗಳ ಬೆಳ್ಸುದು, ಪ್ರಾಣಿಗಳಿಗೆ ಕುಡ್ಯಕೆ ಕಾಡ್‌ಲೆ ನೀರಿನ ವ್ಯವಸ್ಥೆ ಮಾಡ್ದು. ಕೃಷಿಕರಿಗೆ ಬಾರಿ ಉಪದ್ರ ಮಾಡುವ ಪ್ರಾಣಿಗಳ ಕೊಲ್ಲಿಕೆ ಪರ್ಮಿಶನ್ ಕೊಡ್ದು, ಹಿಂಗೆಲ್ಲಾ ಮಾಡಿರೆ ಕೃಷಿಕರ್ ಬದ್ಕುವೊ. ಇನ್ನು ಹಂಞ ಸಮಯ ಹಿಂಗೇ ಇದ್ದರೆ ಬಟ್ಲ್‌ಗಲ್ಲಿ ಗಂಜಿ ಹಾಕಿ ಉಂಬಕೆ ಕುದ್ರುಕಾನ ಕುರೆಗ ಕೂಡಾ ಒಂದು ಕಡೆಂದ ಕುದ್ದ್‌ಕಂಡ್ ಉಂಬಕೆ ಶುರು ಮಾಡುವೋ. ನೋಡು ಏನಾದೆಂತ.. ನಾವು ಕಣ್ಣ್ ಮುಚ್ಚಿರೆ ನೀವು ಒಳರಿ ಅಲ್ಲಾ...

* * * * *

# ಮಾರ್ಪುಳೆ

-ಹರಿಶ್ಚಂದ್ರ ಮೇಲಡ್ತಲೆ

ಡ್ಯಾಡಿ ಡ್ಯಾಡಿ ನಿಲ್ಸಿ ಅದ್ ಎಂತದ್? ನಂಗೆ ಗೊತ್ತಿಲ್ಲದೆ ನನ್ನ ಕಾರ್‌ನ ಬ್ರೇಕ್ ಪೆಡಲ್‌ನ ಒತ್ತಿತ್. ನಂಗೆ ಅಲ್ಲಿ ಯಾವುದ್ ಆಶ್ಚರ್ಯದ ವಸ್ತು ಎಂತದ್ ಕಾಂಬೊದ್ಲೆ. ಆದರೆ ನನ್ನ ಮಂಞಂಗೆ ಅಲ್ಲಿ ಆಶ್ಚರ್ಯದ ವಸ್ತ್ ಕಂಡದೆ. ಮಂಞ ಸಣ್ಣ ಹೈದ ಅಲ್ಲ. ಮೊನ್ನೆ ಇಂಜಿನಿಯರಿಂಗ್‌ಲಿ ಎಂಟನೇ ಸೆಮಿಸ್ಟರ್ ಪರೀಕ್ಷೆ ಬರ್ದವ. ನಮ್ಮ ಹಕ್ಕಲೆನ ನೆಂಟ್ರ್ ಶೆಟ್ಯಡ್ಕ ರಂಜನ್, ರೇಗನ್‌ರವರ ಮನೆಗೆ ನಾವ್ ಹೊಗ್ತಾ ಇದ್ದೊ. ಹಾಲೆಮಜಲ್ ದಾಟಿ ನಡುಗಲ್ಲ್‌ಂದ ಇತ್ತ, ಉತ್ರಂಬೆಂದಲೂ ಇತ್ತ ಮನೆ ಏನೂ ಇಲ್ಲದ ಕಾಡ್‌ಲಿ ಇದ್ದ ರೋಡ್‌ನ ಸೈಡ್‌ಲಿ ಸಾಲ್‌ಗೆ ಹೆಚ್ಚ್ ಕಮ್ಮಿ 30 ಬೊಲಿಗಳ ಇಸ್ಯೊಳ. ಅದರ ನೋಡಿ ಮಂಞ ಕೇಳ್ದ್. ಅದ್ಕೆ ನಾ ಹೇಳ್ದೆ ಅದು ಆಟಿ ತಿಂಗಳ್‌ಲಿ ಮಾರಿ ತೆಗ್ಯೊದ್‌ತ. ಮಾರಿ ತೆಗ್ಯೊದ್‌ತ ಹೇಳ್ದರಿ ಅಲ್ಲ. ಅದ್ ಎಲ್ಲಿ ಇದ್ದದೆ? ಅದ್ ೦ಯಲಲ್ಯೂ ಇದ್ದದೆಂತೇಳಿ ನಮ್ಮ ಹಿರಿಯವರ ನಂಬಿಕೆ ಮತ್ತ್ ಹೆದರಿಕೆ. ಅದ್‌ಕೆ ಬೇಕಾಗಿ ಗದ್ದೆ ಬೇಸಾಯ ಎಲ್ಲ ಆದ ಮೇಲೆ ಆಟಿ ಅಮವಾಸ್ಯೆ ದಿನ ಬೊಲಿ ಮತ್ತ್ ಕೋಳಿನ ಹಿಡ್ಕೊಂಡ್ ಮನೆಗೆ ಹಟ್ಟಿಗೆ ಗದ್ದೆಗೆ ಎಲ್ಲ ಕೂಗ್ ಹಾಕೊಂಡ್ ಸುತ್ತು ಬಂದ್‌ಕೊಂಡ್ ಗಡಿ ಡಾಟ್ಸಿ ಬುಟ್ರೆನೆ ಸಮಾದಾನ. ಗಡಿತ್ತೇಳ್ರೆ ಒಂದೊಂದ್ ಊರ್‌ಲ್ಲಿ ಒಂದೊಂದು ನಿರ್ದಿಷ್ಟ ಜಾಗೆ ಇದ್ದದೆ. ನಮ್ಮೂರ್‌ಲಿ ಈ ಕ್ರಮ ಮಾಡ್ತುದ್ಲೆ? ನಮ್ಮೂರ್‌ಲಿ ಮುಂದೆ ಎಲ್ಲೊವ್ಕ್ ಗದ್ದೆ ಬೇಸಾಯ ಇತ್ತ್. ಆಗ ನಮ್ಮಲ್ಲಿ ಅಡ್ತಲೆ, ಮೇಲಡ್ತಲೆ, ಪಿಂಡಿಮನೆ ಹೀಂಗೆ ಮೂರು ಬೈಲ್‌ನೊವ್ ಸೇರಿ ಮಾರಿ ತೆಕೊಂಡ್ ಹೋಗಿ ಗಡಿಲಿ ಬುಡ್ತಿದ್ದೊ. ಈಗ ನಮ್ಮಲ್ಲಿ ಗದ್ದೆ ಬೇಸಾಯನ್ ಇಲ್ಲೆ ಮಾರಿನ ತೆಕ್ಕೊಂಡ್ ಹೋಗಿ ಬುಡ್ದ್ ಇಲ್ಲೆ. ಈಗ ಜನಗ ಮಾರಿನ ಬಗ್ಗೆ ಏನು ಹೇಳ್ದ್‌ಲೆ? ಅದ್‌ಕೆ ಮೊನ್ನೆ ನೋಡ್ ತಾತ ಮನೆಲಿ (ಅಡ್ತಲೆ ಶಿವಣ್ಣ ಗೌಡ) ತಾತ ಹೇಳ್ದೊ ನೋಡ್. ಮಾರಿನ ತೆಗ್ಯದೆ, ಸುಮಾರು 30 ವರ್ಷ ಆತ್. ಈಗ ನೋಡಿ ಅಡಿಕೆಗೆ ಹಳದಿ ರೋಗ, ಚಾಳೆಗೆ ನುಸಿ ರೋಗ, ಬಾಳೆಗೆ ಹುಳ, ಒಳ್ಳೆ ಮೆಣ್ಸಿಗೆ ಕಟ್ಟೆ, ಬೀಜದ ಮರ ಗೊಡ್ಡ್ ಕಟ್ಟ್‌ದ್, ಕೊಕ್ಕೊಕ್ಕೆ ಕುಂಡತ್ತ, ಬೆಂಡಕ್ಕ್ ಕುರೆ, ರಬ್ಬರ್ ದೈಗೆ ಕಾಟಿ, ರಬ್ಬರ್ ಮರಕ್ಕೆ ಆನೆ ಮತ್ತ್ ಬೆಂಕಿ ರೋಗ ಇದ್ ಎಲ್ಲಾ ಮಾರಿ ತೆಗ್ಯೆದೆನೆ ಅಂತ ಹೇಳಿಕನ ಮಾವಂದರ್ ಹೇಳ್ದೊ ಮಾರಿ ತೆಗ್ಯದೆ 30 ವರ್ಷ ಆದರೆ ಒಂದು ವೇಳೆ ಅದು ಇದ್ದಿದರೆ ಅದು ಒಬ್ಬನೂ ಇರಿಕೆ ಬುಡಿಕೆ ಇತ್ಲೆ. ಮಳೆಗಾಲ ಮಾರಿನ ಹೇಳಿ ಕೋಳಿಗೈಪು, ಪೊಕ್ಕುಳ ರೊಟ್ಟಿನ ಊಟ. ಮಾರಿನ್ ಇಲ್ಲೆ ಗೀರಿನ್ ಇಲ್ಲೆಂತ ಹೇಳಿಕಾನ ಮಮ್ಮಿ, ದೊಡ್ಡಮ್ಮ, ಅಮ್ಮಿಅಕ್ಕ, ಪೊಮ್ಮಿಅಕ್ಕ, ತುಮ್ಮಣ್ಣ ನಾವೆಲ್ಲ ಸೇರಿಕೊಂಡ್ ಬಿದ್ದ್ ಬಿದ್ದ್ ನೆಗಾಡ್ದೊ. ತಾತ ಅವ್ವನ ಮೋರೆ ನೋಡಿ ಎರಡು ಕೈನ ಮೇಲೆ ಮಾಡಿ ಉದ್ದ ನೋಡ್ದೊ,

ನಾನು ಸಣ್ಣವ್ ಇರ್ಕನ ನಮ್ಮ ಊರ್‌ನ ಗಮ್ಮತ್ ಬೇರೇನೆ ಇತ್ತ್. ಇಡೀ ಊರ್‌ಲೆ ಒಂದು ಪ್ರೀತಿ ಸೌಹಾರ್ದ ಅನ್ಯೋನತೆ ಒಗ್ಗಟ್ಟ್ ಆತ್ಮೀಯತೆ ಗೌರವ ನ್ಯಾಯ ನೀತಿ ಎಲ್ಲಾ ಇತ್ತ್. ಈಗ ಈ ಸಂಬಂಧಂತೇಳ್ರೆ ಗಂಡ ಹೆಣ್ಣ್ ಮಕ್ಕ ಇಲ್ಲಿಗೆ ಮುಗ್ತ್. ಸುಮಾರು 35 ವರ್ಷಕ್ಕೆ ಮುಂದೆ ನಮ್ಮ ಹುಕ್ರಪ್ಪಣ್ಣ ಒಂದು ಜೀಪ್ ತೆಗ್ತ್. ಜೀಪ್ ಹಳೆದ್. ಆದರೂ ಇಡೀ ಊರ್‌ನೊವು ಬಂದ್ ಜೀಪ್‌ನ ನೋಡ್ದು, ಹುಕ್ರಪ್ಪಣ್ಣನ ಹೊಗ್‌ಳ್ದ್ ಎಲ್ಲ ಇತ್ತ್. ಈಗ ಆಚೆ ಮನೆವ್ 800 ಕಾರ್ ತೆಗ್ದರೆ ನಾ ಹೇಂಗೆ ಶಿಫ್ಟ್ ಕಾರ್ ತೆಗ್ಯೊದ್. ಈಚೆ ಮನೆ ಗೂಡೆ ಡಿಪ್ಲೊಮೊ ಓದಿರೆ ನನ್ನ ಮಗಳ ಹೇಂಗೆ ಇಂಜನೀಯರ್ ಮಾಡ್ಸುದೂಂತ. ಈ ರೀತಿ ಊರ್ಲಿ ಪ್ರೀತಿ ವಿಶ್ವಾಸ ನಂಬಿಕೆ ಎಲ್ಲ ಕಡಿಮೆ ಆಗಿ ಬರೆ ಪೈಪೋಟಿ ಹಾಂಕಾರ ಮೋಸ ವಂಚನೆ ದ್ರೋಹ ತುಂಬಿ ಹೋವುಟ್. ಅಗ ನನ್ನ ಮಂಞ ನೆಗಾಡಿಕೊಂಡ್ ಇದ್ ಎಲ್ಲಾ ಮಾರಿ ತೆಗ್ಯೊದೆನೇ ಹೇಂಗೆ? ನಂಗ್ ನೆಗೆ ಬಾತ್. ಆಗಿರಿಕ್ ಸಾಕ್ ಎಂತ ಹೇಳ್ದೆ.

ನೀವ್ ಮಾರಿ ತೆಕ್ಕೊಂಡ್ ಹೋದ್ ಎನಾರ್ ಉಟ್ಟಾ? ಉಟ್ಟು ನಂಗೆ ಸುಮಾರ್ ಹನ್ನೆರಡ್ ಹದಿನಾಲ್ಕ್ ಪ್ರಾಯೊಲಿ 3 ಸರ್ತಿ ಹೊದ್ ನೆನೆಪ್ಪು ಉಂಟ್ ಆಟಿ ತಿಂಗಳ ಅಮವಾಸ್ಯೆ ದಿನ ಬೊಳ್ಪಿಗೆ ಬಾಳೆ ರೆಂಬೆ ತಂದ್ ಅದರ ತ್ರಿಕೋನ ಆಕಾರಲಿ ಕಟ್ಟಿ ಅದ್‌ಕೆ ಚಾಳೆ ಚಿರಿ ಲಾಯಕ್ ಕಟ್ಟ್ ಮಾಡಿ ಕುತ್ತಿ ಅದರ ಒಳಗೆ ನೀರ್ ಪುಂಡಿ ಇಸುದು. ಕೋಲ್‌ತ್ರಿ ಕುತ್ತುದ್. ಒಂದು ಸಣ್ಣ ಕೋಳಿನ ಕಾಲ್ ಕಟ್ಟಿ ಅದರ ತಲೆ ಕೆಳಗೆ ಮಾಡಿ ಬೆರಳ್‌ಲಿ ನೇತಾಡ್ಸಿಕೊಂಡ್ ಹೋದ್. ಕೋಳಿ ಪಿಂಯ್ಯೊ, ಪಿಂಯೋ ಅಂತ ಹೇಳ್ಕನ ಮಾರಿ ಹಿಂದೆಂದ ಬಾದ್‌ಂತ್ ನಂಬಿಕೆ. ಇದರ ಎಲ್ಲಾ ಮುಂದೆನೊವ ಹಿಡ್ಕೊಂಬೊದು, ಹಿಂದೆನವ ಇಬ್ಬರಿಗೆ ಬೇಕಾದ ಪೊಕ್ಕ ರೊಟ್ಟಿ ಉಂಬಕೆ ಬಾಳೆ ಎಲೆ ಒಂದು ಕಾಯಿ ಹುಳಿ ಮೆಣ್ಸು ಹಿಡ್ಕೊಂಬುದು. ಸುಮಾರು ಹಿಂಬೊತ್ತ್ 6.45 ಘಂಟೆ ಹೊತ್ತಿಗೆ ಸುರುಗೆ ಮನೆಗೆ ಮೂರು ಸುತ್ತು ಬಂದ್ ಕೊಟ್ಟೆಗೆಗೆ ಹಟ್ಟಿಗೆ ಸುತ್ತು ಬಂದ್ ಗದ್ದೆಗೆ ಸುತ್ತ್ ಬಂದ್ ಹೋದ್. ಆಗ ನಾಲ್ಕ್ ಐದ್ ಮನೆವ್ ಒಟ್ಟಿಗೆ ಹೋದ್. ಸುರೂಗೆ ನಾವ್ ಮೇಲಡ್ತಲೆವ್ ಹೊರಡ್‌ದ್. ನಮ್ಮ ಕೂಗ್ ಕೇಳ್ದ ಕೂಡ್ಲೆ ಕೆಳಗೆ ಅಡ್ತಲೆವ್ ಕೂಗ್ ಹಾಕಿಕೆ ಸುರು ಮಾಡ್ವೆ. ಮತ್ತು ನಾವ್ ಒಟ್ಟ್ ಸೇರಿಕೊಂಡ್ ಹೋಕನ ಅತ್ತಂದ ಪಿಂಡಿ ಮನೆವ್ ಬಾವೊ. ಆಗ ಸುಮಾರ್ 25 ಮನೆವ್ ಸೇರಿಕೊಂಡ್ ರೋಡ್‌ಲಿ ಹೋಗಿ ಹಾಸ್ಪಾರೆ ಹಕ್ಕಲೆ ರೋಡ್‌ನ ಎರಡ್ ಸೈಡ್‌ಲಿ ನಾವ್ ತೆಕೊಂಡ್ ಹೋದ ಬೊಲಿಗಳ ಇಸಿದ್ ಕಾಯಿ ಒಡ್ದ್ ಕೋಳಿನ ತಲೆ ಕೊಯ್ದು ರಕ್ತನ ಬೊಲಿಗೆ ಬುಡ್ದು. ಒಂದು ಚೂರಿ ಮುಳ್ಳ್‌ನ ಕೊನೆ ಮೇಲೆ ಒಂದು ಕಲ್ಲ್ ಇಸಿ ಬಾದು. ಕೋಳಿಗಳ ತಕೊಂಡು ಅಡ್ತಲೆ ದೊಡ್ಡ ಮನೆಗೆ ಬಾದು. ದೊಡ್ಡ ಮನೆಗೆ ಬಂದ್ ಅವರಲ್ಲಿ ಇದ್ದ ದೊಡ್ಡ ಕೊಟ್ಟೆಗೆಲಿ ಕೋಳಿ ಗೈಪು ಮಾಡಿ ಕೊಟ್ಟೆಗೆಲಿ ಗಮ್ಮತ್‌ನ ಪೊಕ್ಕ ರೊಟ್ಟಿ ಕೋಳಿ ಗೈಪ್‌ನ ಊಟ. ಅಂದ್ ಇಡೀ ಊರ್ನೊವು ಕುಸಲ್ ಮಾತಾಡಿ ನೆಗಾಡಿ ಸಂತೋಷೊಲಿ ಮನೆಗೆ ಹೋವೊ. ಸ್ವಲ್ಪ ವರ್ಷ ಕಳ್ದ

ಮೇಲೆ ಕಾರಣಾಂತರದಿಂದ ದೊಡ್ಡ ಮನೆಲಿ ಬುಟ್ಟ್, ಅಡ್ತಲೆ ಶಾಲೆಲಿ ಅಡಿಗೆ ಮಾಡ್ದೊ. ಆ ಸಮಯಲಿ ಶಾಲೆಲಿ ಬಿಸಿ ಊಟದ ಬಾಗ್ಯ ಇಲ್ಲದ ಸಮಯ. ಒಲೆ ಪಾತ್ರೆ ಸೌದೆ ಎಲ್ಲ ತಂದ್ ಮಾಡಿಕೆ ಕಷ್ಟ ಆತ್. ಮತ್ತೊಂದು ವರ್ಷ ಅವರವರ ಮನೆಗೆ ಕೋಳಿನೆ ತೆಕೊಂಡ್ ಹೋದೊ. ಮತ್ತೊಂದು ವರ್ಷಂದ ಮಾರ್ಪುಳೆನೆ ನಿತ್ತತ್.

ನೋಡು ಮುನ್ನ ನಮ್ಮ ಹಿರಿಯೊವು ಆಚರಿಸಿಕೊಂಡ್ ಬಂದ ಪ್ರತಿಯೊಂದ್ ಸಂಪ್ರದಾಯಲಿ ಕೂಡ ಕಂಡಿತವಾಗಿಯೂ ಒಂದ್ ಕಥುಣುತಜ ಕಥುಟಣ (ಧನಾತ್ಮಕ ಅಂಶ) ಇದ್ದೇ ಇದ್ದದೆ. ಅದರ್ಲಿ ಕೂಡಾ ನಂಬಿಕೆ ಇದ್ದೇ ಇದ್ದದೆ. ದೃಢವಾದ ನಂಬಿಕೆಂದ ಅವರವರ ಆತ್ಮ ಸ್ಥೈರ್ಯ ಹೆಚ್ಚಿದೆ. ಇದರ್ನೆ (ಘುಟಟ ಕಂತಿಜಡಿ) ಅಂತ ಹೇಳ್ವೆ. ಈ ಘುಟಟ ಕಂತಿಜಡಿ ಗಟ್ಟಿ ಇದ್ದ ಮನುಷ್ಯನ ಹಕ್ಕಲೆ ಕೆಲವೊಂದ್ ಖಾಯಿಲೆಗ ಆಗಲಿ ಅಥವಾ ನಾವೇ ಹೇಳ್ವಂತ ಕೊಲೆ ಪೀಡೆ ಪಿಶಾಚಿ ಆಗಲಿ ಬಾದ್‌ಲೆ. ಇದ್‌ಕೆ ನಿಂಗೆ ನಾ ಎರಡು ಉದಾಹರಣೆ ಕೊಟ್ಟನೆ.

1) ಸುಮಾರು 35 ವರ್ಷದ ಹಿಂದೆ ಅರಂತೋಡ್‌ಲಿ ಒಬ್ಬ ಡಾ। ವೆಂಕಟೇಶ್ ಅಂತ ಇದ್ದೊ. ಆದರೆ ಅವರ ಎಲ್ಲವೂ ಕರೆತಿದೊದು ಎಂಕುಟೇಶ ಡಾಕ್ಟ್ರ ಅಂತ. ಯಾರಿಗಾದ್ರ್ ಉಶಾರಿಲ್ಲದಿದ್ರೆ ಅವುಕೆ ಮೊದ್ದು ತಾಕೆ ಮತ್ತೊಬ್ಬ ಹೋದ್. ಕೆಲವ್ ಸರ್ತಿ ಅಡ್ತಲೆ ಅಂಗಡಿ ಹಕ್ಕಲೆ ಬಾಕನ ಅರಂತೋಡಿಗೆ ಯಾರಾದರ್ ಹೋವು ಸಿಕ್ಕಿರೆ ಅವರೊಟ್ಟಿಗೆ ಹೇಳ್ದ್. ಅವ್ವಂಗೆ ಉಷಾರಿಲ್ಲೆ. ಎಂಕುಟೇಶ ಡಾಕ್ಟ್ರ ಹಕ್ಕಲೆಂದ ಮೊದ್ದು ತರೊಕೂಂತ. ಹೀಂಗೆ ಬಾಯಿಂದ ಕೆಬಿಗೆ ಬಾಯಿಂದ್ ಕೆಬಿಗೆ ಆಗಿ ಒಮ್ಮೊಮ್ಮೆ ಮೂರ್ನೆ ಅಥವಾ ನಾಲ್ಕನೆ ಜನ ಡಾಕ್ಟ್ರ ಹಕ್ಕಲೆ ಹೋದು. ಅಲ್ಲಿ ಹೇಳ್ಕನ ಒಮ್ಮೊಮ್ಮೆ ಹೊಟ್ಟೆ ಬೇನೆಂತ ಹೇಳ್ವ ಬದಲು ತಲೆ ಬೇನೆ ಆದ್. ಕೆಬಿ ಬೇನೆ ಹೋಗಿ ಕಣ್ಣ್ ಬೇನೆ ಆದು. ಆದರೂ ಕೂಡಾ ಕೈಯಿಂದ ಕೈಗೆ ಬಂದ ಮೊದ್ದ್‌ಲಿ ಖಾಯಿಲೆ ಗುಣ ಆತಿತ್. ಈಗ ಖಾಯಿಲೆಯವನೇ ಡಾಕ್ಟ್ರ ಹಕ್ಕಲೆ ಹೋದರೂ ಅವಂಗೆ ನಂಬಿಕೆ ಕಮ್ಮಿ. ಹುಡ್ಗ ಡಾಕ್ಟ್ರ ಆದರೆ ಇವ ಕಲ್ತುಟಾ ಅಲ್ಲಾ ಕಲಿತ ಉಟ್ಟಾ ? ಹಜ ಪ್ರಾಯದ ಡಾಕ್ಟ್ರ ಆದರೆ ಈ ಅಜ್ಜ ಡಾಕ್ಟ್ರಗೆ ಮರ್ತಿದ್ರು ಅಲ್ಲರೆ ನನ್ನ ಖಾಯಿಲೆ ಇವು ಕಲ್ಯಕ್ಕಾಕನ ಇದ್ದಿರಿಕ್ಕಿಲೆ ಈಗ ಎಡ್ಮಿಟ್ ಆಕೆ ಹೇಳಿ ನಾಲ್ಕು ದಿನ ಕಳ್ದ ಮೇಲೆ ಮಂಗ್ಳೂರಿಗೆ ತೆಕೊಂಡು ಹೋಕೆ ಹೇಳ್ವೆ ಏನೋ ಅಂತ ಅವು ಪರೀಕ್ಷೆ ಮಾಡಿಕೆ ಮುಂದೆ ಡಾಕ್ಟ್ರ ಒಟ್ಟಿಗೆ ವಿಶ್ವಾಸ ಇರ್ದುಲೆ. ಹಾಂಗೆ ಅವು ಕೊಟ್ಟ ಮೊದ್ದಿಲಿ ಗುಣ ಅದ್ ಸಹ ಕಮ್ಮಿ.

2) ನಾನು ಸಣ್ಣವ ಇರ್ಕನ ನಾವ್ಗೆ ಅಡ್ತಲೆಲಿ ಒಂದು ಸಣ್ಣ ಅಂಗಡಿ ಕಂ ಹೋಟೆಲ್ ಇತ್ತ್. ಆಗ ಅಂಗಡಿಗೆ ಬರೊವು ಅಡ್ತಲೆ, ಪಿಂಡಿಮನೆ, ಕಾಯರದೊವು ಜಾಸ್ತಿ. ಈ ಮೂರು ಬೈಲಿನೊವು ನಾವ್‌ಗೆ ನೆಂಟ್ರುಗ. ಪ್ರಾಯದೊವು ನಮ್ಮ ಅಪ್ಪಂಗೆ ಮಾವಂದ್ರು ಆಕು. ಸಾದಾರಣ ಪ್ರಾಯದೊವ್ ಬಾವ ನಂಣ್ಕಂದಿರ್ ಆಕು, ಸಣ್ಣ ಪ್ರಾಯದೊವ್ ಅಳಿಯಂದಿರ್ ಆಕು. ಅಡ್ತಲೆಲಿ ಮಾಧವ ಗೌಡ ಅಂತ ಒಬ್ಬ

ಇದ್ದೊ ನಂಗೆ ಮಾವ ಆಕು. ಬಾರಿ ಕುಸಾಲ್‌ನ ಜನ. ಅವು ನಮ್ಮ ಅಪ್ಪನ ಬಾವ ಅಂತ್ ಹೇಳ್ವೊ. ನಮ್ಮ ಅಪ್ಪಂದ ಪ್ರಾಯಲಿ ಸಣ್ಣೊವು. ಅಪ್ಪ ಅವರ ಮಾಧವಣ್ಣ ಅಂತ ಹೇಳ್ವೊ. ಒಂದು ದಿನ ಈ ಮಾಧವ ಮಾವ ಎಂ.ಜಿ.ಆರ್ ಮತ್ತು ಜಯಲಲಿತ ತೊಬ್ಬಿ ಹಿಡ್ಕೊಂದಿದ್ದ ಒಂದು ಪೋಸ್ಟರ್‌ನ ತಂದ್ ನಮ್ಮ ಅಂಗಡಿ ಬಾಗಿಲಿಗೆ ಅಂಟಿಸಿದೊ. ಈಗನ ಕಾಲಲಿ ಅದ್ ಏನೂ ಅಲ್ಲ ಆದರೆ ಆಗನ ಕಾಲಲಿ ಅದ್ ಹೈ ಸೆಕ್ಸ್. ನಮ್ಮ ಅಪ್ಪ ಬಾವ ನಂಣ್ಕಂದಿರ ಒಟ್ಟಿಗೆ ಕುಸಾಲ್ ಮಾತಾಡಿರೂ ತುಂಬಾ ಗಂಭೀರ ಸ್ವಭಾವದವು. ಸತ್ಯ ಧರ್ಮ ನ್ಯಾಯ ನೀತಿಗೆ ಹೆಸರಾದವು. ಅಪ್ಪಂಗೆ ಊರಿಲಿ ಧರ್ಮರಾಯ ಅಂತ ಅಡ್ಡ ಹೆಸ್‌ರು ಕೂಡಾ ಇತ್ತು. ಎಂ.ಜಿ.ಆರ್ ಮತ್ತು ಜಯಲಲಿತನ ಪೋಸ್ಟರ್ ಅಂಟಿಸಿದ ಮೇಲೆ ಯಾರಾರ್ ಬಾವ ನಂಣ್ಕಂದಿರು ಅಂಗಡಿಗೆ ಬಂದಾಂಗೆ ಅಂಗಡಿ ಫುಲ್ ಕುಸಾಲ್ ಲಿ ಮುಳುಗ್ತಿತ್. ಕೆಲವು ಜನ ಅಪ್ಪನ ಬೇಕುಂತೇಳಿದ್ ಹಾಸ್ಯಲಿ ಕೆಣ್ಕುದ್. ಅಪ್ಪ ಅಡಿ ನೋಡಿಕೊಂಡೊ ಅಥವಾ ಅಲ್ಲಿ ಇದ್ದವರ ಮೋರೆ ನೋಡಿಕೊಂಡ್ ನೆಗಾಡ್ದು. ಒಮ್ಮೊಮ್ಮೆ ಸಿಟ್ಟು ಬಂದರೆ ಹುಸು ನೆಗಾಡಿಕೊಂಡ್ ಆ ಅರೆ ಮೊರ್ಲ ಮಾಧವನೊಟ್ಟಿಗೆ ಹೋಗಿ ಕೇಳಿ ಅಂತ ಹೇಳ್ತಿದ್ದೊ. ಒಂದು ದಿನ ಹಿಂಬೊತ್ತು ಆಕನ ಆ ಮಾಧವ ಮಾವ ಅಂಗಡಿಗೆ ಬಂದೊ. ಮಾಮೂಲಿ ಮಾತು ಕತೆ ಆದ ಮೇಲೆ ಮಾಧವ ಮಾವ ಹೇಳ್ದೊ ಅವ್ವ ಚಳಿ ಜರಲಿ ನಡ್ಗಿದೆ. ಕುಜುಂಬನ ಪಕ್ಕಲೆಂದ ಭಸ್ಮ ಮತ್ತು ನೂಲು ತೆಕೊಂಡ್ ಹೋಗಿ ಕಟಿತ್ಲಾರೆ ಆಕಿಲೆ. ಹೌದಪ್ಪಾ ಹೌದು ಆದಷ್ಟು ಬೇಗ ಕುಜುಂಬನ ಹಕ್ಕಲೆ ಹೋಗಿ ಬನ್ನಿಂತ ಹೇಳ್ದೊ ಅಪ್ಪ. ಅವು ಅಪ್ಪನ ಪಕ್ಕಲೆಂದ ನಾಲ್ಕು ಮೊಳ ಪಟ್ಟೆ ನೂಲು ತೆಕೊಂಡು ಹೋದೊ. ಸುಮಾರು ಹೊತ್ತ್‌ಲಿ ಮಾಧವ ಮಾವ ಬಾಕಾನ ಅಪ್ಪ ಕೇಳ್ದೊ ಕುಜುಂಬ ಇತ್ತಾ ? ಇತ್ತ್ ಬಾವ ನೂಲು ಭಸ್ಮ ಕೊಟ್ಟತ್. ಆಗಲೆಪ್ಪ ಆಗಲಿ ಆದಷ್ಟು ಬೇಗ ಹೋಗಿ ಅತ್ತೆಗೆ ಭಸ್ಮ ಹಾಕಿ ನೂಲು ಕಟ್ಟಿಂತ ಹೇಳ್ದೊ. ಹೋನೆ ಬಾವ ಮಧ್ಯಾಹ್ನ ಸುರು ಆದ ಮಳೆ ಒಂದು ಚೂರು ಕಮ್ಮಿ ಆತ್ಲೆ. ಹಂಜ ಕಮ್ಮಿ ಆದ ಮೇಲೆ ಹೋನೆ ಅಂತ ಹೇಳಿ ಅಂಗಡಿಲಿ ಬೇರೆ ಕುದ್ದುಕೊಂದು ಇದ್ದ ಜನರೊಟ್ಟಿಗೆ ಲೊಟ್ಟೆ ಬುಟ್ಟುಕೊಂಡ್ ಕುದ್ದೊ. ಹಂಜ ಹೊತ್ತಾದ ಮೇಲೆ ಅಪ್ಪ ಇನ್ನೊಮ್ಮೆ ಮಾಧವಣ್ಣ ಅಂತ ಹೇಳಿಕನ ಕೊರ್ಗ ಬಾವಂಗೆ ಸಿಟ್ಟು ಬಂದುಟುಂತ ಹೇಳಿ ಎದ್ದ್ ಹೊರಡಿಕೆ ರೆಡಿ ಆದೊ. ಎದ್ದ್ ನಿತ್ತ್ ತಬುರ್ಸಿ ನೋಡ್ರೆ ಕುಜುಂಬ ಕೊಟ್ಟ ಭಸ್ಮ ನೂಲ್ ಇಲ್ಲೆ. ಎಲ್ಲಿಯೋ ಬಿದ್ದು ಹೋವ್ಟು. ಅಪ್ಪ ಸಿಟ್ಟ್‌ಲಿ ಅಯ್ಯನ ಬಂಡೆ ಮಾಧವಣ್ಣ ಇನ್ನೊಮ್ಮೆ ಕುಜುಂಬನ ಹಕ್ಕಲೆ ಹೋಗಿ ಬನ್ನಿ ಅಂತ ಹೋಳ್ದೊ. ಮಾಧವ ಮಾವ ಅತ್ತ ಇತ್ತ ನೋಡ್ದೊ ನಾಲ್ಕು ಮೊಳ ಪಟ್ಟೆ ನೂಲು ಪುನ: ತೆಕೊಂಡ್ ಸೀದ ಹೊರಗೆ ಹೋಗಿ ಒಂದು ಬಾಳೈ ಕೀಂತ್ ತೆಕೊಂಡ್ ಬಂದೊ. ಒಲೆ ಬುಡಲಿ ಕುದ್ದೊ. ಬಾಳೈಲೆನ ಬಾಡ್ಸಿದೊ ಅದರ ಎರಡು ಸೈಡ್‌ನ ಕೊಯ್ದೊ ಒಲೆಂದ ಹಂಞ್ಯ ಒಳ್ಳ ಬೂದಿನ ಬಾಳೈಲೆಗೆ ಹಾಕಿದೊ.

ಪಾತ್ರಂದ ಒಂದು ಹತ್ತು ಬೆಳ್ತೆಕ್ಕಿ ಹಾಕಿದೊ. ಅದಿ ನೋಡಿ ನೆಗಾಡಿಕಂಡ್ ಪಟ್ಟೆ ನೂಲಿಗೆ ಎಲ್ಲಿಯೋ ಹೇಂಗೋ ಐದಾರು ಗಂಟು ಹಾಕಿದೊ. ನೆಗಾಡಿಕಂಡ್ ಬಾವ ಬನ್ನೆಂತೇಳಿ ಹೊರಡ್ ಕಾನ ಅಪ್ಪ ಹೇಳ್ದೊ. ಹಾ ಅತ್ತೆ ಎಂತ ಪುಣ್ಯಾತ್ಮ ಮಂಞನ ಹೆತ್ತು ಬುಟ್ಟರಿ ಅಂತ ಹೇಳ್ಕನ ಅಂಗಡಿಲಿ ಕುದ್ದುಕೊಂಡಿದ್ದ ಕಾಯರ ಮಾಧವ ಬಾವ ಓಹೊಹೋ ಓಹೊಹೋ, ಕಾಯರ ಗೋಪಾಲ ಬಾವ ಆಹಹ: ಆಹಹ: ನೆಕ್ಕರೆ ಕೃಷ್ಣಪ್ಪಣ್ಣ ಇಹಿಹಿಹಿ ಇಹಿಹಿಹಿ ಅಂತ ಎಷ್ಟೋ ಹೊತ್ತು ನೆಗಾಡ್ದೊ. ಅಪ್ಪ ಮನೆಗೆ ಬಂದು ಎರಡು ಮೂರು ಸಲ ಹೋಳ್ದೊ. ಆಚೆ ಪಾಲ್ ಅತ್ತೆಗೆ ಜೋರು ಚಳಿ ಜರ ಆ ಮೊರ್ಲ ಮಾಧವ ಹೀಂಗೆಲ್ಲಾ ಮಾಡ್ತ್. ನಾಳೆ ಇನ್ನು ಅತ್ತೆನ ಅರಂತೋಡಿಗೆ ಹೊರೊಕೊ ಏನೊ. ಅಂದರೆ ಆಗ ವಾಹನ ಸೌಕರ್ಯ ಇಲ್ಲೆ. ಹೊರ್ದುಂತೇಳ್ರೆ ಶಬರಿಮಲೆಲಿ ನೋಡು ಮಲೆ ಹತ್ತಿಕೆ ಬೊತ್ತದವರ ಚೆಯರಿಗೆ ಎರಡು ಬಡ್ಗೆ ಕಟ್ಟಿ ಡೋಲಿ ಡೋಲಿತೇಳಿಕಣ್ ನಾಲ್ಕು ಜನ ಹೊತ್ತುಕೊಂಡ್ ಹೋತಿದ್ ನೋಡು ಹಾಂಗೆ. ಮಾರ್ಣೆ ದಿನ 11.00 ಘಂಟೆಗೆ ಮಾಧವ ಮಾವ ಅಂಗಡಿಗೆ ಬಂದೊ. ದೂರಂದಲೆ ಅಪ್ಪನ ನೋಡಿಕೊಂಡ್ ನೆಗಡಿಕೊಂಡ್ ಬಾದರ ನೋಡಿ ಅಪ್ಪಂಗಾತ್ ಅತ್ತೆ ಎದ್ದ್ ಕುದ್ದಿರೊಕುಂತ. ಹಾ ಪುಣ್ಯಾತ್ಮರೇ ಹೇಂಗ್ಯೊಳೊ ಅತ್ತೆ ಅಂತ ಅಪ್ಪ ಕೇಳ್ದೊ. ನಿಮ್ಮ ಅತ್ತೆನ ಚಳಿ ಜರ ಎಲ್ಲಾ ಬುಟ್ಟುಟು ಬಾವ. ಹುಷಾರಾಗೊಳೊ. ಇಂದು ಬೊಳ್ಪಿಗೆ ಜಾಲ್ ಗುಡ್ಸಿದ್ ಮತ್ತೆ ಕರು ಬುಟ್ಟದ್ ನಿಮ್ಮ ಅತ್ತೆನೆಂತೇಳಿ ಹಿಂದೆನ ದಿನದ ಘಟನೆನ ನೆನ್ಸಿ ಒಳ್ಳೆ ನೆಗಡ್ದೊ. ಕುಜುಂಬನ ಭಸ್ಮ ಹಾಕಿ ನೂಲು ಕಟ್ಟಿರೆ ನಾ ಖಂಡಿತಾ ಹುಷಾರಾನೆಂತೇಳ್ವ ದೃಢವಾದ ನಂಬಿಕೆ ಉಗ್ಗವ್ವಂಗೆ ಇತ್ತ್. ಆ ನಂಬಿಕೆಲಿ ಉಗ್ಗವ ಹುಷಾರಾದ್.

ಡ್ಯಾಡಿ ಮಾರಿ ಬಗ್ಗೆ ನಿಮ್ಮ ವೈಯಿಕ್ತಿಕ ನಂಬಿಕೆನ ಹೇಳಿ. ಕಾಣದ ಮಾರಿನ ಬಗ್ಗೆ ನಂಗೆ ಸ್ಪಷ್ಟವಾಗಿ ಏನೂ ಹೇಳಿಕೆ ಆದ್ಲೆ. ಆದರೆ ನಿಂಗೆ ಮಾರಿನ ನೋಡೊಕೂಂತೇಳ್ರೆ ಒಂದು ಉಪಾಯನ ಹೇಳ್ನೆ. ಇರ್ಲ್ ಮಾರಿನ ನೋಡಿಕನ ಹೆದರಿಕೆ ಆದ್ಲೆನಾ ? ಅದ್ಕೆ ನಿಂಗೆ ಹಗ್‌ಲ್ ಮತ್ತ್ ಬೇರೆ ಜನ ಇರ್ಕನ ನೋಡಿಕಾವಂಗೆ ಮಾಡ್ನೆ. ನೀ ಎನು ಮಾಡೊಕೂಂತೇಳ್ರೆ ಅತ್ತೆ ಮತ್ತು ಸೊಸೆ ಇದ್ದ ಹತ್ತು ಮನೆನ ಗುರ್ತು ಮಾಡೊಕು. ಸೊಸೆಗೆ ಮದ್ವೆ ಆಗಿ ಐದಾರು ವರ್ಷ ಆದರೂ ಕಳ್ಯೊಕು. ಹತ್ತು ವರ್ಷ ಕಳ್ದರೆ ಇನ್ನು ಒಳ್ಳೆದೆ. ಅತ್ತೆಗೆ ಗೊತ್ತಿಲ್ಲದಾಂಗೆ ಸೊಸೆನೊಟ್ಟಿಗೆ ಸೊಸೆಗೆ ಗೊತ್ತಿಲ್ಲದಾಂಗೆ ಅತ್ತೆನೊಟ್ಟಿಗೆ ಮಾರಿನ ಬಗ್ಗೆ ನಿಮ್ಮ ಅಭಿಪ್ರಾಯ ಏನು ಅದ್ ಉಟ್ಟಾ? ಅಂತ ಕೇಳೊಕು. ಎಲ್ಲಾ ಮನೆಲಿ ಅಲ್ಲದಿದ್ದರೂ ಕೆಲವೊಂದು ಮನೆಲಿ ನಿಂಗೆ ಮಾರಿನ ತೋರ್ಸುವೆ ?

ಅಹಾಹಾಹಾ ಅಹಾಹಾಹಾ ಅಹಾಹಾಹಾ

ಮಾರಿನ ಗೌಜಿಲಿ ಶೆಟ್ಯಡ್ಕ ಮನೆಯ ಕಂಪೌಂಡ್ ಒಳಗೆ ಕಾರ್ ಬಂದ್ ನಿಂತದೇ ಗೊತ್ತಾತ್ಲೆ

* * * * *

ಚಿಂತನೆ

# ಉಪಕಾರ - ಉಪದ್ರ

-ಉಳುವಾರನ
ರೋಶನ್ - ವಸಂತ್

ಉಪಕಾರ ಮತ್ತೆ ಪರೋಪಕಾರ ಮನ್‌ಸ್ಸನ ಬದ್‌ಕ್ಕನ ಮಹಾನ್ ಮೌಲ್ಯಗಳ್‌ಲ್ಲಿ ಒಂದು. ಇನ್ನೊಬ್ಬರ ಕಷ್ಟ, ಬೇಜಾರನ ನೋಡಿ ಮನ್‌ಸ್‌ಕರ್‌ಗಿ ಮಾನವೀಯತೆನ ದೃಷ್ಠಿಂದ ಮಾಡ್‌ವ ಎಲ್ಲಾ ಉಪಕಾರ, ಸಹಕಾರ, ದಾನಗಳ್‌ನ ಉಪಕಾರತ ಹೇಳಿವೆ. ಹಂಗೆ ಬ್ಯಾರೆಯವ್ಕೆ ಉಪಕಾರ ಮಾಡ್‌ದ್ದೇ ಪರೋಪಕಾರ. ಪರೋಪಕಾರಕ್ಕಾಗಿ ಮರಗ ಹಣ್ಣ್‌ಗಳ್‌ನ ಕೊಟ್ಟವೆ. ಹೊಳೆಗ ಹರ್‌ದವೆ. ಹಸ್‌ಗ ಹಾಲ್‌ನ ಕೊಟ್ಟವೆ.

ಉಪಕಾರ ಮಾಡ್‌ದ್ದ ಸಹ ಬದ್‌ಕ್ಕನ ಸೌಭಾಗ್ಯತ ತಿಳ್‌ಕೊಣೊಕ್ ಇಂತಹ ಪರೋಪಕಾರಿ ಜನ್‌ರ್‌ನ ದೇವ್ರೆ ಸೃಷ್ಠಿ ಮಾಡಿ ಭೂಮಿಗೆ ಕಳ್‌ಸಿವೇತ ಹೇಳ್ವೆ ಸರ್ವಜ್ಞ ಕವಿಗ.

ಉಪಕಾರ ಮಾಡ್‌ದರ್‌ಂದ ನಾವು ಕಳ್‌ಕೊಣ್ಣುದ್ ಏನು ಇಲ್ಲೆ. ಅದರ್‌ಂದ ನಮ್ಮಿಗೆ ಒಳ್ಳದದೆ ಯಾರ ಮನ್‌ಸ್ಸ್‌ಲ್ಲಿ ಉಪಕಾರ ಮಾಡ್ವ ಬುದ್ದಿ ಇದದ್ದೆಯೋ ಅವೇ ಸುಖಿಗ. ಇದರ್‌ಂದ ಅವರ ಕಷ್ಟಗ ಎಲ್ಲ ಪರಿಹಾರ ಆದ್ದೆ. ಮತ್ತೆ ಮತ್ತೆ ಅವ್‌ಕ್ಕೆ ಸಂಪತ್ತ್ ಸಿಕ್ಕೆ ಸಿಕ್ಕಿದೆ. ಮನ್‌ಸ್ಸನ ಹುಟ್ಟ್‌ನ ಸಾರ್ಥಕತೆ ಉಪಕಾರಲ್ಲೆ ಉಟ್ಟ್. ಉಪದ್ರತ ಹೇಳ್‌ರ್ರೆ ಇನ್ನೊಬ್ಬಕ್ಕೆ ಕಷ್ಟ ಕೊಡ್‌ದ್‌ದ್ತ ಅರ್ಥ. ಬೇರೆಯಾವುಕ್ಕೆ ಮೋಸ ಮಾಡಿ ತಾನು ಲಾಭ ಮಾಡಿಕೊಣ್ಣುದು ಮೋಸ ಮಾತ್ರ ಅಲ್ಲ ಅದ್ ಮಹಾ ಪಾಪ. ವ್ಯಾಪರಲ್ಲಿ ಮೋಸಲ್ಲೆ ವ್ಯವಹಾರ ಮಾಡಿ ಶ್ರೀಮಂತರಾದು ಮಹಾಪಾಪ ಅದರ್‌ಲ್ಲಿ ಮಾಡ್‌ದ ಲಾಭಲ್ಲಿ ಹೆಸ್ರ್ □ ಕೀರ್ತಿ ಪಡ್‌ಕೊಣ್ಣುದು. ಪಾಪನೇ ನಿಜ ಆಗಿಯು ಅಂತಹವು ಮನ್ಸಿಗೆ ಉಪದ್ರ ಮಾಡಿಕಂಡವೆ.

ನಮಿಗೆ ಉಪದ್ರ ಮಾಡಿ ಹಿಂಸೆ ಕೊಟ್ಟವುಕ್ಕೆ ನೆಗಡಿಕಂಡೆ ಉಪಕಾರನ ಮಾಡೋಕು. ಅದೇ ದೊಡ್ಡ ಧರ್ಮತ ಮಹಾ ಭಾರತಲ್ಲಿ ಅರ್ಜುನಂಗೆ ಧರ್ಮರಾಯ ಹೇಳಿವೆ.

ಮನ್‌ಸ್ಸ ಉಪಕಾರ ಮಾಡ್‌ದವುಕ್ಕೆ ಉಪದ್ರ ಮಾಡ್‌ದ್ದನ ನಾವು ಕಾಣ್ಣ್‌ತ ಇದ್ದವೆ. ಮನ್‌ಸ್ಸರ್ ಮರ್‌ಗಳ್‌ನ ಕಡ್ಡ್ ಹಿಂಸೆ ಕೊಟ್ಟವೆ. ಆದರೇ ಅದೇ ಮರಗ ಮನ್‌ಸಂಗೆ ನೆರ್‌ಳ್ ಕೊಡ್‌ದ್ದನ

ನಿಲ್ಸಿಯೊಳ್ಳೊನ? ಉಪಕಾರಕ್ಕೆ ಸಮಾನದ ಬೇರೆ ಶ್ರೀಮಂತಿಕೆ ಇಲ್ಲೆ ಉಪದ್ರಕ್ಕೆ ಮಿಗಿಲಾದ ದಾರಿದ್ರ್ಯ ಬೇರೊಂದಿಲ್ಲೆ.

ಕೃತಜ್ಞತೆ ಮತ್ತೆ ಕೃತಘ್ನತೆ ಶಬ್ದದ ಅರ್ಥ ಬ್ಯಾರೆ ಬ್ಯಾರೆ ತರಲ್ಲಿ ಉಟ್ಟ್, ಕೃತಜ್ಞತೆತ ಹೇಳ್ದ್ ಶ್ರೇಷ್ಠ ಗುಣ ಕೃತತ ಹೇಳ್‌ರ್ರೆ ಮಾಡ್‌ದ ಉಪಕಾರ ಜ್ಞತ ಹೇಳ್‌ರ್ರೆ ಅದನ್ನ ತಿಳ್‌ಕಂಡವ ಕೃತಜ್ಞತ ಹೇಳ್‌ರ್ರೆ ಉಪಕಾರನ ಗ್ಯಾನ ಮಾಡಿಕಣ್ಣವ. ಮಾಡ್‌ದ ಉಪಕಾರಕ್ಕೆ ಕೃತಜ್ಞತೆನ ಸಲ್‌ಸುದತ ಅರ್ಥ. ಕೃತಜ್ಞತೆ ಒಳ್ಳೆ ಸಂಸ್ಕೃತಿನ ಲಕ್ಷಣ. ಕೃತಘ್ನತೆ ಸ್ವಾರ್ಥದ ಲಕ್ಷಣ. ಮನ್‌ಸ ಸ್ವಭಾವತ ಕೃತಜ್ಞ ಜೀವಿ ಅದರೆ ಸ್ವಾರ್ಥಲ್ಲಿ ಅಂವ ಸಿಕ್ಕಿಕಂಡ್ ಕೃತಘ್ನನಾಗ್‌ವ ಸಾಧ್ಯತೆ ಉಟ್ಟ್,

ಇಂದ್ ಸುಮಾರ್ ಜನ್‌ರ ಬಾಯಿಯಲ್ಲಿ ಉಪಕಾರ ಮಾಡಿಕ್ಕೆ ಹೋಗಿ ಉಪದ್ರ ಅತ್‌ತ ಹೇಳ್‌ವ ಮಾತ್ತ್‌ನ ದಿನ ಕೇಳ್‌ತ ಇದ್ದವೆ. ಹೊಳೆದಾಟಿದ ಮ್ಯಾಲೆ ಅಂಬಿಗನ ಮರ್‌ತಂಗೆ ಹಂಗೆ ಸುಮಾರ್ ಜನ ಮಾಡ್ದ ಉಪಕಾರನೇ ಮರ್ತವೆ. ಉಂಡ ಮನೆಗೆ ದ್ರೋಹ ಮಾಡ್‌ವ ಸ್ವಭಾವನ ಬೆಳ್‌ಸಿಕಣಕದ್ ಮಹಾಭಾರತದ ಕರ್ಣನಂಗೆ ಅಧಿಕಾರ, ಗೌರವ ಉಕ್ಕುವಂಗೆ ಇದ್ದರು ಅದನ ಬುಟ್ಟ್ ಕಷ್ಟ ಕಾಲಲ್ಲಿ ಉಪಕಾಶರ ಮಾಡ್‌ದ ಸ್ನೇಹಿತನ ಪಕ್ಷ ಹಿಡಿದ್ದ್ ಹೋರಾಡಿ ಪ್ರಾಣ ಕಳ್‌ಕಂಡ ಕರ್ಣನಾಗ ಅಕ್ಕು ಅಗ ಬದ್‌ಕ್ಕಿಗೊಂದು ಬೆಲೆ, ನೆಲೆ.

ಪಾಪಕ್ಕೆ ಶಿಕ್ಷೆ, ಪುಣ್ಯಕ್ಕೆ ರಕ್ಷೆ, ಪಾಪಿಗಳಿಗೆ ನರ್‌ಕ ಪುಣ್ಯವಂತರಿಗೆ ಸ್ವರ್ಗ ಇದ್ ಎಲ್ಲ ಧರ್ಮಗಳ್‌ಲ್ಲಿ ಸಾಮಾನ್ಯ ಅಟ್ಟ್, ಇನ್ನೊಬ್ಬರಿಗೆ ಹಿಂಸೆ ಕೊಡ್‌ದ್ದ್ ಪಾಪದ ಕೆಲ್ಸ್‌ಸ ಪರರ್‌ತ ಹೇಳ್‌ರ್ರೆ ಮನ್ಸರಷ್ಟೇ ಅಲ್ಲ ಎಲ್ಲ ಜೀವಿಗಳು ಸೇರಿವೆ.

ನಮ್ಮ ಪಾಪ ಕರ್ಮಗಳ್‌ನ ಕಳಿಯಕ್ಕೆ ನಾವು ದೇವ್‌ರ್‌ಲ್ಲಿ ನಂಬಿಕೆ ಮಾಡ್‌ಕೊಣೂಕ್ಕ್. ದೇವ್‌ರಲ್ಲಿ ನಾವು ಮಾಡುಗುವ ಭಕ್ತಿ ನಮ್ಮ ಪಾಪ ಕೃತ್ಯಗಳಿಗೆ ಕಡಿವಾಣ ಹಾಕಿದೆ. ಸತ್ಯವಂತನ ಎದೆಲ್ಲಿ ದೇವ್‌ರ್ ಇರ್‌ದರ್‌ಂದ ಯಾವ ದೇವ್‌ಸ್ಥಾನದ ಅವಶ್ಯಕತೆನು ಇರ್‌ದ್‌ಲ್ಲೆ.

ಉಪ್ಪು ಕೊಟ್ಟವರ್ ವಯಸ್ಸಗುವ ಮುಟ್ಟ ಗ್ಯಾನ ಮಾಡೋಕುಂತ ಹೇಳುವಂಗೆ ಇಡೀ ಮಹಾಭಾರತದ ಕಥೆಗೆ ಕಾರಣರಾದ ಬೀಷ್ಮನವು ಮನ್‌ಸ್ ಪೂರ್ತಿ ಆಗಿ ಪಾಂಡವರ ಪಕ್ಷಲ್ಲಿ ಇದ್ದರು ಉಪ್ಪುನ ಋಣಕ್ಕಾಗಿ ಕೌರವನ ಪಕ್ಷಲ್ಲಿ ಸೇನಾದಿಪತ್ಯನ ವಹಿಸಿ ಹೋರಾಡಿ ಉಪ್ಪುನ ಭಾರನ ಕಮ್ಮಿ ಮಾಡಿಕೊಂಡೊ. ಅದರೆ ಇಂದ್ ಉಪ್ಪು ಋಣ ಇದರ ಅರ್ಥನೆ ಜನ ಮರ್ತ್ತಂಗೆ ಉಟ್ಟ್, ನಮ್ಮ ಕೈಯಿಂದ ಬೇರೆಯವುಕ್ಕೆ ಉಪಕಾರ ಮಾಡಿಕ್ಕೆ ಆಗದಿದ್ದರು ಉಪದ್ರವ ಮಾತ್ರ ಮಾಡಕ್ಕಾದ್.

* * * * *

ಅಡುಗೆ

# ಮಟ್ಟೆ ಗೈಪು

– ಬಿ ಯಶೋದ ರಾಘವ
ಬಾಳಿಕಲ

ಬೇಕಾದ ಸಾಮಾಗ್ರಿಗ :

6 ಮಟ್ಟೆ
3 ಟೊಮೆಟೊ
2 ದೊಡ್ಡ ನೀರುಳ್ಳಿ
10,12 ಕುಂಟೆ ಮೆಣ್ಸ್
1 ಸವುಂಟು ಕೊತ್ತಂಬರಿ ಬಿತ್ತ್
4 ಸಂವುಂಟು ಜೀರಿಗೆ
1 ಸವುಂಟು ಅರ್‌ಸಿನ
2,3 ಲವಂಗ
ಪಟ್ಟೆ (ಕೆತ್ತೆ) 1 ಚೂರು
ಬೆಳ್ಳುಳ್ಳಿ 7,8 ಎಸಳ್
ಹಂಞ ಕಾಯಿ ಹೂವು
ಶುಂಠಿ ಒಂದು ಚೂರು
ಅಗ್ರಣೆ ಸೊಪ್ಪು

ಮಾಡ್ವ ಕ್ರಮ :

ಮಾಡುವ ಕ್ರಮ : ಮಟ್ಟೆನ ಬೇಯಿಸಿ ಚೋಲಿ ತೆಗ್ದ್ ಇಸಿಕಣಿ ಮೆಣ್ಸ್‌ನ ಬನಲೆಲಿ ಎಣ್ಣೆ ಹಾಕಿ ಹಂಞ ಹುರಿಯಕು. ಒಟ್ಟಿಗೆ ಜೀರಿಗೆ ಅಕ್ಕಿ, ಕೊತ್ತಂಬರಿ ಬಿತ್ತ್ ಹಾಕಿ ಬಿಸಿ ಮಾಡೊಕು. ಕಾಯಿನ ಹೂವುನ ಲಾಯ್ಕ್ ಕೆಂಪಾಗಿ ಹುರುದು, ಅರಿಸಿನ, ಲವಂಗ, ಪಚ್ಚೆ ಎಲ್ಲ ಸಾಮಾನ್‌ಗಳನ್ನ ಮಿಕ್ಸಿಲಿ ಮಿಕ್ಸಿ ಮಾಡಿ ಇಸಿನಿ.

ನೀರುಳ್ಳಿನ ಉದ್ದ ಕೊಯ್ದ್ ಅಡ್ಡಕೆ ಕೊಯ್ಯೊಕು. ಶುಂಠಿನ ಸಣ್ಣ ಗುದ್ದಿರು ಆದು ಸಣ್ಣ ಚೂರು ಮಾಡಿರು ಆದು. ಬೇರೆ ಬೇರೆ ಇಟ್ಟ್‌ಕಂಡ್ ಒಂದು ಬನಲೆಲಿ ಹಂಞ ಹೆಚ್ಚಿಗೆ ಎಣ್ಣೆ ಹಾಕಿ ಇಸಿನಿ ಎಣ್ಣಗೆ ದಾಸಿಮೆ ಹಾಕಿನಿ. ಅದ್ ಸಿಡಿಯಕನ ನೀರಳ್ಳಿ ಹಾಕಿ ಸ್ವಲ್ಪ ಬಾಡಿಕಂಡ್ ಬಾಕನ ಟೊಮೆಟನ ಹಾಕಿ ಹಂಞ ಉಪ್ಪು ಹಾಕಿನಿ. ಶುಂಠಿನು ಹಾಕಿನಿ. ಇದೆಲ್ಲಾ ಕಾದ್ ಬಾಕನ ಮಿಕ್ಸಿ ಮಾಡ್ದ ಅರ್ಪುನ ಹಾಕಿ ಸಣ್ಣ ಉರಿಲಿ ಎಣ್ಣೆಲೇ ಅದ್ ಕೊದಿತ್ತಾ ಇರ್ಲಿ. ಉಪ್ಪು ನೋಡಿ ಹಾಕಿಕಣಿ. ಅದಕ್ಕೆ ಮಟ್ಟೆ ಚೋಲಿ ತೆಗದ್ ಇಸಿದರ ಸಣ್ಣ ಸಣ್ಣ ಗೀರ್ ಮಾಡಿ ಇಡೀ ಮಟ್ಟೆನ ಹಾಕಿ ಹಂಞ ಹೊತ್ತು ಇರ್ಲಿ ಬೇಕರೆ ಸ್ವಲ್ಪ ಕೊತ್ತಂಬರಿ ಸೊಪ್ಪು ಪೊರ್ಮುಳಕ್ಕೆ ಹಾಕಿ ಇಳ್ಸಿ. ಕುಚ್ಚಲಕ್ಕಿ ಉಗ್ಗೆಗೆ ಖಾರ ಖಾರದ ಮಟ್ಟೆ ಗೈಪ್ ಲಾಯಿಕ್ ಆದೆ. 2 ಮುಂಡಿ ಅನ್ನನು ಹೆಚ್ಚಿಗೆ ಉಣ್ಣಕ್.

* * * * *

# ತಂಬಿಟ್ಟ್

– ಕೊಕ್ಕಲೆ ರುಕ್ಮಿಣಿ ಮುತ್ತಪ್ಪ

ಬೇಕಾದ ಸಾಮಾಗ್ರಿಗ :

1. 4 ಕಪ್ ಕುಷಲಕ್ಕಿ
2. 1 ಕಪ್ ಬೆಳ್ತಿಗೆ ಅಕ್ಕಿ'
3. ಏಲಕ್ಕಿ–2
4. ಮೆಂತೆ– 2 ಟೀ ಚಮಚ
5. 20 ಬಾಳೆ ಹಣ್ಣು
6. ಹೊರ್ದ ಎಳ್ಳ್ 1 ಟೀ ಚಮಚ
7. ಹೆರ್ದ ತೆಂಗಿನಕಾಯಿ 2 ಕಪ್
8. ಚಿಟಿಕಿ ಉಪ್ಪು
9. ಹಂಞಾ ಹಸ್‌ನ ತುಪ್ಪ

ಮಾಡ್ವ ಕ್ರಮ :

ಕುಚ್ಚಲಕ್ಕಿ ಬೆಳ್ತಿಗೆ ಅಕ್ಕಿ ಮತ್ತೆ ಮೆಂತೆನ ಕೆಂಪಾಗಿ ಹೊರ್ದ್ ಸಣ್ಣ ಹುಡಿ ಮಾಡಿಕಣಕು. ಬಾಳೆ ಹಣ್ಣ್‌ನ ಸಿಪ್ಪೆ ತೆಗ್ದ್ ಪಾತ್ರೆಲಿ ಹಾಕಿ ಲಾಯ್ಕ ಕಲ್ಸೊಕು. ಹೆರ್ದ ತೆಂಗಿನಕಾಯಿ ಹುಡಿ ಮಾಡ್ದ ಏಲಕ್ಕಿ ಜೊತೆಲಿ ಸೇರ್ಸಿ ಕಲ್ಸಿಕಣಕು. ಮತ್ತೆ ಸಣ್ಣ ಸಣ್ಣ ಮುದ್ದೆ ಮಾಡಿ ಪಾತ್ರೆಲಿ ಹಾಕೊಣಕು. ಈಗ ತಂಬಿಟ್ಟು ರೆಡಿ. ಹಸ್‌ನ ತುಪ್ಪ ಸೇರ್ಸಿ ತಿಂದರೆ ಲಾಯಿಕ ಇದ್ದದೆ.

* * * * *

# ಅರೆಭಾಷೆ ಒಗಟ್‌ಗ

ಸಂಗ್ರಹ : ಉಳುವಾರನ ರಾಣಿ ವಸಂತ್

- ಚಿನ್ನನ ಬಿಸಾಡ್ವೆ ಬೆಳ್ಳಿನ ತಿಂದವೆ – ಬಾಳೆಹಣ್ಣು
- ಊರುಟ್ಟು ಜನ ಇಲ್ಲೆ, ದಾರಿ ಉಟ್ಟು ವಾಹನ ಇಲ್ಲೆ – ಭೂಪಟ
- ಹೋಕನ ಮೂರು ಜನ, ಬಾಕನ ಒಬ್ಬನೆ – ಎಲೆ, ಅಡಿಕೆ, ಸುಣ್ಣ
- ದಿನ ಹೊತ್ತಾರೆ ಆದರೆ ಮನೆನ ಮುಂದೆ ಚಿತ್ತಾರ – ರಂಗೋಲಿ
- ಕೆಂಪು ಕೋಟೆ ಒಳಗೆ ಕರಿಕಲ್ಲುಗ – ಕಲ್ಲಂಗ್‌ಡಿ ಹಣ್ಣು
- ಒಂದು ಕೈಗೆ ನೂರೆಂಟ್ ಬೆರಳ್ಳ್‌ಗ – ಬಾಳೆಗೊನೆ
- ಒಂದು ಬಾಮಿ ಅದರ ಒಳಗೆ ಒಂದು ತೊಟ್ಟು ನೀರಿಲ್ಲೆ – ಅಚ್ಚುಬೆಲ್ಲ
- ಕೆಂಪು ಮಡಿಕೆನ ತುಂಬಾ ಮೆಣ್‌ಸ್‌ನ ಕಾಳ್‌ಗ – ಪೊಪ್ಪಯಿ ಹಣ್ಣು
- ಮ್ಯಾಲೆ ಹಸ್‌ರ್, ಒಳಗೆ ಕೆಂಪು, ತಿಂದರೆ ತಂಪು – ಕಲ್ಲಂಗಡಿ ಹಣ್ಣು
- ಹಗಲ್ ನಿದ್ರೆ ರಾತ್ರೆ ಎಚ್ಚರ – ಬೀದಿ ದೀಪ
- ಆಕಾಶಂದ ಇಳ್‌ದ್ ಒಂದು ಅಂಗೈಲಿ ಮನೆ ಮಾಡಿ ಪ್ರಾಣ ಬುಟ್ಟದೆ – ಹೇನ್
- ಅಂಕ್‌ಡೊಂಕುನ ಬಾಮಿ ಬಾಗಿ ನೋಡ್‌ರ್ರೆ ನೀರಿಲ್ಲೆ – ಕೆಮಿ {ಕೆಬಿ}
- ಅಕ್ಷರ ಉಟ್ಟ್ ಲಿಪಿ ಇಲ್ಲೆ, ಶಾಸನ ಉಟ್ಟ್ ಶಿಲೆ ಅಲ್ಲ ಬೆಳೆ ಉಟ್ಟ್ ಗದ್ದೆ ಅಲ್ಲ – ರೂಪಾಯಿ, ನಾಣ್ಯ
- ಒಂದು ಕೊಂಬಾರೆನ ತುಂಬಾ ಸೌದೆ ಕಟ್ಟ್‌ನ ರಾಶಿ – ಬೆಂಕಿಪೆಟ್ಟಿಗೆ
- ಸಾಗರನ ಮಂಜ, ಸಾರಿಗೆ ನೆಂಟ – ಉಪ್ಪು
- ಕುದ್ದರೆ ಕೊಂಬೆ, ನೋಡಿಕೆ ಮಿಠಾಯಿನ ಪೆಟ್ಟಿಗೆ – ಜೇನುಗೂಡು
- ಸುತ್ತ ಗರಿಕೆ ಮದ್ಯಲಿ ಮಡಿಕೆ – ಕಣ್ಣು
- ಸುತ್ತ ಸುಣ್ಣದ ಗೋಡೆ, ಎತ್ತ ನೋಡ್‌ರ್ ಒಳಗೆ ಹೋಕೆ ಬಾಗ್‌ಲ್ ಇಲ್ಲೆ – ಮೊಟ್ಟೆ

## ಹಿಂಗಾರ ತ್ರೈಮಾಸಿಕ ಪತ್ರಿಕೆ ಚಂದಾದಾರನ ತಿಳುವಳ್ಕೆಗೆ

- ಕರ್ನಾಟಕ ಅರಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ
- ಆಗ್‌ವ 'ಹಿಂಗಾರ' ಪತ್ರಿಕೆನ ನೀವ್ ಎಲ್ಲವು ಸದಸ್ಯರ್ ಆಕು. ಬಿಡಿ ಸಂಚಿಕೆ
- ಬೆಲೆ ರೂ. 20.00, ತ್ರೈವಾರ್ಷಿಕಕೆ ರೂ. 200.00 ಅದೆ.
- ಸದಸ್ಯರ್ ಆದವುಕೆ ಪತ್ರಿಕೆನ ಅಂಚೆಲಿ ಕಳ್ಸುವೆ.
- ನೀವ್ಗಳ ಪರಿಚಯಸ್ತರಿಗೆ ಸದಸ್ಯರ್ ಆಕೆ ತಿಳ್ಸೊಕು.
- ಕತೆಗ / ಪದ್ಯಗ / ಚುಟುಕ /ಲೇಖನಗ ಇತಂವುಕ್ಕೆಲ್ಲಾ ಅವಕಾಸ ಉಟ್ಟು.
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಬರ್ದಿರಕು.
- ಹೆಸರ್ / ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.

ನಾವ್ಗಳ ವಿಳಾಸ :

ಸಂಪಾದಕರ್

ಹಿಂಗಾರ ತ್ರೈಮಾಸಿಕ ಪತ್ರಿಕೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ –571 201,

ಕೊಡಗು ಜಿಲ್ಲೆ

ಈಮೇಲ್ : arebaseacademy@gmail.com

ವೆಬ್‌ಸೈಟ್ : www.arebhasheacademy.com

ದೂರವಾಣಿ : 08272 –223055

## ಅಕಾಡೆಮಿಯ ಪ್ರಕಟಣೆಗ

ಸರ್ಮಾಲೆ : ಎಂ.ಜಿ ಕಾವೇರಮ್ಮ

ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ ಕಾವೇರಮ್ಮ

ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ

ಕುಂಕುಮ : ಪೂಜಾರೀರ ಜಿ. ಮಾದಪ್ಪ

ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ ಮುಡೂರು

ಬೇಟೆನ ಬಿರ್ಸ – ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ

ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ

ತೋರಣ : ಬಾರ್ಯಂಡ ಆರ್. ಜೋಯಪ್ಪ

ಬೊಲ್ಪು : ಲೋಕೇಶ್ ಕುಂಚಡ್ಕ

ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯನ

ನೆಂಪುಗಳ ರಂಗೋಲಿ : ಎಂ.ಜಿ ಕಾವೇರಮ್ಮ

ಹೊಸ ಬೊದ್ಕು : ಉದಯಕುಮಾರಿ

# ಅಕಾಡೆಮಿ ನಡ್ಸಿದ ಕಾರ್ಯಕ್ರಮಗ

1. 2016 ಅಕ್ಟೋಬರ್ 16 ರಂದ್ ಐತ್ವಾರ ಚೆಂಬು ಗ್ರಾಮದ ಸ.ಹಿ.ಪ್ರಾ ಶಾಲಾ ವಠಾರಲಿ 'ಅರೆಬಾಸೆ ಸಂಸ್ಕೃತಿ ಸಿರಿ ಮತ್ತೆ ಸಾಹಿತ್ಯ ಸುಗ್ಗಿ' ಕೂಡುಕೂಟ ನಡ್ಸಿದ್ದೊ. ಈ ಕಾರ್ಯಕ್ರಮನ ಶಾಸಕರಾದ ಶ್ರೀ ಕೊಂಬಾರನ ಜಿ.ಬೋಪಯ್ಯನವು ಉದ್ಘಾಟನೆ ಮಾಡ್ದೊ. ಅಕಾಡೆಮಿ ಅಧ್ಯಕ್ಷರ್ ಶ್ರೀ ಕೊಲ್ಯದ ಗಿರೀಶ್‌ನವು ಅಧ್ಯಕ್ಷತೆ ವಹಿಸಿದ್ದೊ, ಮುಖ್ಯ ನೆಂಟ್ರಾಗಿ ಪಂಚಾಯತ್ ಅಧ್ಯಕ್ಷರಾದ ಶ್ರೀ ಮಾಧವ ಪೊಯ್ಯಮಜಲು, ಮಡಿಕೇರಿ ತಾಲೂಕು ಪಂಚಾಯತ್ ಅಧ್ಯಕ್ಷರ್ ಶ್ರೀಮತಿ ತೆಕ್ಕಡೆ ಶೋಭ ಮೋಹನ್, ಶ್ರೀ ದಾಮೋದರ್ ಕುಯಿಂತೋಡು, ಎಸ್‌ಡಿಎಂಸಿ ಸ.ಹಿ.ಪ್ರಾ ಶಾಲೆ ಚೆಂಬು ಇದರ ಅಧ್ಯಕ್ಷರ್ ಶ್ರೀ ವಾಸುದೇವ ಕಾಚೇಲು, ಶ್ರೀ ಕಿನಿಮಣಿ ದೈವಸ್ಥಾನ, ಚೆಂಬು ಇದರ ಮೊಕ್ತೇಸರ್ ಶ್ರೀ ರಾಧಾಕೃಷ್ಣ ಹೊಸೂರು ಇವು ಭಾಗವಹಿಸಿದ್ದೊ,

ಶ್ರೀ ಗೋಪಾಲ ಪೆರಾಜೆ ಇವ್ರ ಅಧ್ಯಕ್ಷತೆ ನಡ್ದ ಚಿಂತನ-ಮಂಥನ ವಿಚಾರಗೋಷ್ಠಿಲಿ , ಅರೆಬಾಸೆ ಸಂಸ್ಕೃತಿ ಬೆಳವಣಿಗೆಲಿ ಮಹಿಳೆ ಬಗ್ಗೆ ಶ್ರೀಮತಿ ಸ್ವರ್ಣಕಲ ಕಿಶೋರ್ ತಳೂರು, ಅರೆಬಾಸಿಕರ ಸಂಪ್ರದಾಯದ ಬಗ್ಗೆ ಶ್ರೀ ಬಾರಿಯಂಡ ಜೋಯಪ್ಪ ಅರೆಬಾಸಿಕರ ಸಂಸ್ಕೃತಿ ಬೆಳವಣಿಗೆಲಿ ಅರೆಬಾಸೆನ ಪಾತ್ರ ಬಗ್ಗೆ ಶ್ರೀ ಸೂದನ ಈರಪ್ಪ ಇವು ಉಪನ್ಯಾಸ ಮಾಡ್ದೊ.

ಅರೆಬಾಸಿಕರ ಮದ್ವೆ ಅಂದ್ ಇಂದ್ ಪಟ್ಟಾಂಗ ಕಾರ್ಯಕ್ರಮಲಿ ಶ್ರೀ ಕಿಶೋರ್ ಕಿರ್ಲಾಯ, ಇವರ ಅಧ್ಯಕ್ಷತೆಲಿ ನಡ್ತ್, ಶ್ರೀ ಅನಂತ ಎನ್.ಸಿ. ನಿಡಿಂಜಿ, ಶ್ರೀ ಸೂರಜ್ ಹೊಸೂರು, ಶ್ರೀ ಕಿಶೋರ್ ಉಳುವಾರು, ಶ್ರೀ ಚಂದ್ರಶೇಖರ ಹೊಸೂರು, ಭವಾನಿಶಂಕರ ಅಡ್ತಲೆ ಶ್ರೀ ಲೋಕನಾಥ್ ಎಸ್.ಪಿ.ಪೆಲ್ತಡ್ಕ ಇವ್ ಮಾತ್‌ನ ಬಿರ್ಸರ್ ಆಗಿ ಭಾಗವಹಿಸಿದ್ದೊ.

ಅಪರಾಹ್ನ ಮುಕ್ತಾಯ ಜಂಬರಲಿ ಮುಖ್ಯ ನೆಂಟ್ರಾಗಿ ಅಕಾಡೆಮಿನ ಮಾಜಿ ಅಧ್ಯಕ್ಷರಾದ ಶ್ರೀ ಎನ್.ಎಸ್.ದೇವಿಪ್ರಸಾದ್, ಶ್ರೀ ನಾಗೇಶ್ ಕುಂದಲ್ಪಾಡಿ, ಶ್ರೀ ಬಾಲಚಂದ್ರ ಪಳಗಿ, ಶ್ರೀ ದಿನೇಶ್ ಮಡಪ್ಪಾಡಿ, ಶ್ರೀ ಎಂ.ಎಂ.ಪಾರ್ವತಿ, ಶ್ರೀ ಜಿ.ವಿ.ಗಣಪಯ್ಯ ಇವು ಭಾಗವಹಿಸಿದ್ದೊ.

ಈ ಜಂಬರಲಿ ಗ್ರಾಮೀಣ ಕ್ರೀಡೆ ಅರೆಬಾಸೆ ಸಂಸ್ಕೃತಿ ಬಿಂಬಿಸುವ ನೃತ್ಯ, ಅರೆಬಾಸಿಕ ಸಾಂಸ್ಕೃತಿಕ ಛದ್ಮವೇಸ, ಅರೆಬಾಸೆ ಹಾಡ್ ಗಾರಿಕೆ , ಹಸೆ ಬರೆಯೋದು, ಅರೆಬಾಸೆ ಸಾಹಿತ್ಯ, ಸಂಸ್ಕೃತಿ, ಗ್ರಾಮದ ಬಗ್ಗೆ ರಸಪ್ರಶ್ನೆ, ಸೋಬಾನೆ ಪದ ಹಾಡ್ದು, ಅರೆಬಾಸೆ ಪ್ರಬಂಧ ಸ್ಪರ್ಧೆ, ಅರೆಬಾಸೆ ಸ್ವರಚಿತ ಕವನ,ಹಗ್ಗಜಗ್ಗಾಟ ಇವುಗಳ್ನ ಆಯೋಜಿಸಿದ್ದೊ. ಅರೆಬಾಸೆ ಸಂಸ್ಕೃತಿ-ಕಿರು ರೂಪಕ ಮತ್ತೆ ಸಮೂಹ ನೃತ್ಯಗ, ಶ್ರೀ ಲೋಕೇಶ್ ಊರುಬೈಲ್ ನಿರ್ದೇಶನದ ಅರೆಬಾಸೆ ಕಿರುನಾಟಕ,

ಶ್ರೀ ಚಂದ್ರಶೇಖರ್ ಪೆರಾಜೆ ನಿರ್ದೇಶನದ ಅರೆಬಾಷೆ ಯಕ್ಷಗಾನ ಸಾಂಸ್ಕೃತಿಕ ಕಾರ್ಯಕ್ರಮಗ ನಡ್ತ್. ಶ್ರೀಮತಿ ಸಂಗೀತಾ ರವಿರಾಜ್ ಇವು ಕಾರ್ಯಕ್ರಮದ ಸಂಚಾಲಕರಾಗಿ ಕಾರ್ಯನಿರ್ವಹಿಸಿದ್ರೊ.

2. 31.10.2016 ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಹುತಾತ್ಮ ದಿನಾಚರಣೆನ ಕೋಟೆ ಆವರಣ, ಮಡಿಕೇರಿಲಿ ನಡ್ತ್. ಬೊಳ್ಪಿಗೆ ಗುಡ್ಡೆಮನೆ ಅಪ್ಪಯ್ಯಗೌಡ ಸ್ಮಾರಕಕ್ಕೆ ಕೊಡಗು ಜಿಲ್ಲಾ ಉಸ್ತುವಾರಿ ಸಚಿವರ್ ಶ್ರೀ ಎಂ.ಆರ್.ಸೀತರಾಂ ಪುಷ್ಪಾರ್ಚನೆ ಮಾಡ್ರೊ, ಕೋಟೆ ಆವರಣಲಿ ಶ್ರೀ ಎಂ.ಕೃಷ್ಣಪ್ಪ ವಸತಿ ಸಚಿವ ಶ್ರೀ ಎಂ.ಕೃಷ್ಣಪ್ಪನವು ಉದ್ಘಾಟನೆ ಮಾಡ್ರೊ, ಮಡಿಕೇರಿ ವಿಧಾನಸಭಾ ಕ್ಷೇತ್ರದ ಶಾಶಕ ಶ್ರೀ ಮಂಡೇಪಂಡ .ಪಿ.ಅಪ್ಪಚ್ಚುರಂಜನ್ ಅಧ್ಯಕ್ಷತೆ ವಹಿಸಿದ್ರೊ, ಸಂಸದ ಶ್ರೀ ಪ್ರತಾಪಸಿಂಹ, ಶಾಸಕರಾದ ಶ್ರೀ ಕೆ.ಜಿ.ಬೋಪಯ್ಯ, ಶಾಸಕರಾದ ಶ್ರೀ ವಾಸು, ವಿಧಾನಪರಿಷತ್ ಸದಸ್ಯ ಶ್ರೀ ಎಂ.ಪಿ.ಸುನಿಲ್ ಸುಬ್ರಮಣಿ ಮತ್ತೆ ಶ್ರೀಮತಿ ಶಾಂತೆಯಂಡ ವೀಣಾ ಅಚ್ಚಯ್ಯ, ಕೊಡಗು ಜಿಲ್ಲೆ ಪೋಲೀಸ್ ವರಿಷ್ಠಾಧಿಕಾರಿಗ ಡಾ.ಪಿ.ರಾಜೇಂದ್ರ ಪ್ರಸಾದ್, ಅಪರ ಜಿಲ್ಲಾಧಿಕಾರಿಗ ಶ್ರೀ ಸತೀಶ್ ಕುಮಾರ್, ತಾಲ್ಲೂಕು ಪಂಚಾಯತ್ ಅಧ್ಯಕ್ಷರ್ ಶ್ರೀಮತಿ ತೆಕ್ಕಡೆ ಶೋಭ ಮೋಹನ್ ಇವು ಮುಖ್ಯ ನೆಂಟ್ರಾಗಿ ಭಾಗವಹಿಸಿದ್ರೊ, ರಾಜ್ಯ ಒಕ್ಕಲಿಗರ ಸಂಘದ ಅಧ್ಯಕ್ಷ ಡಾ.ಅಪ್ಪಾಜಿಗೌಡ, ಗೌಡ ಶ್ರೀ ದಂಬೆಕೋಡಿ ಎಸ್.ಆನಂದ, ಚರಿತ್ರೆಕಾರರ್ ಶ್ರೀ ತಲಕಾಡು ಚಿಕ್ಕರಂಗೇಗೌಡ ವಿಶೇಷ ಅಹ್ವಾನಿತರಾಗಿ ಭಾಗವಹಿಸಿದ್ರೊ. ಕಾರ್ಯಕ್ರಮಲಿ ಪ್ರಾರ್ಥನೆ, ರೈತಗೀತೆ, ನಮನಗೀತೆನ ವಿಚಾರ ಮಂಡನೆ ಹಾಡುಗಾರಿಕೆ, ಲಾವಣಿ ಹಾಡು, ಕಾವ್ಯ ವಾಚನ ನಡ್ರೊ.

3. 26.11.2016 ರಂದು ರವೀಂದ್ರ ಕಲಾಕ್ಷೇತ್ರ, ಬೆಂಗಳೂರು ಇಲ್ಲಿ 2015ನೇ ಸಾಲ್‌ನ ಗೌರವ ಪ್ರಶಸ್ತಿ ಪ್ರದಾನ ಜಂಬರ ನಡ್ತ್. ಪ್ರಶಸ್ತಿ ಭಾಜನರಾದ ಶ್ರೀ ಟಿ.ಜಿ.ಮುಡೂರು, ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ, ಶ್ರೀಮತಿ ಗೀತಾ ಮೋಂಟಡ್ಕ ಇವ್ಕೆ ಪ್ರಶಸ್ತಿ ನೀಡಿ ಗೌರವಿಸಿದ್ರೊ,

   ವಿರಾಜಪೇಟೆ ಶಾಸಕರಾದ ಕೆ.ಜಿ ಬೋಪಯ್ಯನೊವು ಕಾರ್ಯಕ್ರಮದ ಉದ್ಘಾಟನೆ ಮಾಡ್ರೊ, ಡಾ.ಪುರುಷೋತ್ತಮ ಬಿಳಿಮಲೆ ಪ್ರಶಸ್ತಿ ಪ್ರದಾನ ಭಾಷಣ, ಸನ್ಮಾನ್ಯ ಕೇಂದ್ರ ಸಾಂಖ್ಯಿಕ ಯೋಜನಾ ಅನುಷ್ಠಾನ ಸಚಿವರಾದ ಶ್ರೀ ಸದಾನಂದ ಗೌಡ ಇವ್ 5ನೇ ಸಂಚಿಕೆ ತ್ರೈಮಾಸಿಕ ಪತ್ರಿಕೆ ಹಿಂಗಾರನ ಬಿಡುಗಡೆ ಮಾಡ್ರೊ, ವಸತಿ ಸಚಿವರಾದ ಸನ್ಮಾನ್ಯ ಶ್ರೀ ಎಂ.ಕೃಷ್ಣಪ್ಪ, ಶಾಸಕರ್ ಸನ್ಮಾನ್ಯ ಶ್ರೀ ವಾಸು, ಕನ್ನಡ ಮತ್ತು ಸಂಸ್ಕೃತಿ ಇಲಾಖೆನ ನಿರ್ದೇಶಕರ್ ಶ್ರೀ ಕೆ.ಎ.ದಯಾನಂದು ಇವು ಮುಖ್ಯ ನೆಂಟ್ರಾಗಿ ಭಾಗಿಯಾಗಿದ್ರೊ, ಕೊಡಗು ಮತ್ತೆ ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರುನ ಅದ್ಯಕ್ಷರ್ ಶ್ರೀ ಪದ್ಮಾಕೊಲ್ಚಾರ್, ಕೊಡಗು ಗೌಡ ಸಮಾಜ, ಬೆಂಗಳೂರ್ನ ಅಧ್ಯಕ್ಷರ್ ಶ್ರೀ ಅಮ್ಮವನ ವಾಸು, ಬಿ.ಬಿ.ಎಂ.ಪಿ ಬೆಂಗಳೂರ್ನ

ಜಂಟಿ ಆಯುಕ್ತರ್ ಶ್ರೀ ಪಾಣತ್ತಲೆ ಪಳಂಗಪ್ಪ ಕಾರ್ಯಕ್ರಮಲಿ ಉಪಸ್ಥಿತರಿದ್ದೊ. ಅರಣೋದಯ ಕಲಾತಂಡಂದ ಅರೆಭಾಷೆ ಸಾಂಸ್ಕೃತಿಕ ಕಾರ್ಯಕ್ರಮ, ಶ್ರೀ ರಾಮ ಯುವಕ ಸಂಘ ದವರ್‌ಂದ ಸಿದ್ದವೇಷ, ಶಶಿಧರ್ ಮಾವಿನಕಟ್ಟೆ ಇವರ್‌ಂದ ಅರೆಬಾಷೆ ಹಾಡ್, ಶ್ರೀ ಅಮ್ಮಾಜೀರ ಪೊನ್ನಪ್ಪ ಇವರ ತಂಡಂದ ನೃತ್ಯರೂಪಕ ಕಾರ್ಯಕ್ರಮಗ ನಡ್ತ್,

ಡಾ.ಪೂವಪ್ಪ ಕಣಿಯೂರು ಇವು ಕಾರ್ಯಕ್ರಮದ ಸಂಚಾಲಕರಾಗಿ ಕಾರ್ಯನಿರ್ವಹಿಸಿದ್ದೊ,

4. 7–8–12.2016 ರಂದ್ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಿವಿಧ ಅಕಾಡೆಮಿಗ ಮತ್ತೆ ಪ್ರಾಧಿಕಾರಗಳ ಸಂಯುಕ್ತಾಶ್ರಯಲಿ ಸಂಗಮ–ಸಂಭ್ರಮ–2016 "ಸಾಂಸ್ಕೃತಿಕ ಸಾಮರಸ್ಯ" ಕಾರ್ಯಕ್ರಮನ ಮಡಿಕೇರಿ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜ್ ಮೈದಾನಲಿ ಎರ್ಪಡಿಸಿದ್ದೊ,

ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿ, ಕೊಂಕಣಿ ಸಾಹಿತ್ಯ ಅಕಾಡೆಮಿ,ತುಳು ಸಾಹಿತ್ಯ ಅಕಾಡೆಮಿ, ನಾಟಕ ಅಕಾಡೆಮಿ,ಸಂಗೀತ ನೃತ್ಯ ಅಕಾಡೆಮಿ, ಜಾನಪದ ಅಕಾಡೆಮಿ, ಯಕ್ಷಗಾನ ಬಯಲಾಟ ಅಕಾಡೆಮಿ, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕೊಡವ ಸಾಹಿತ್ಯ ಅಕಾಡೆಮಿ, ರಾಷ್ಟ್ರೀಯ ಸಂತ ಕವಿ ಕನಕದಾಸ ಮತ್ತು ಸಂಶೋಧನಾ ಕೇಂದ್ರ ಇವರ್‌ಂದ, ಜಾನಪದ ಗೀತೆ, ನೃತ್ಯ, ಮೃತ್ಯರೂಪಕ, ತೊಗಲುಗೊಂಬೆಯಾಟ,ನಾಟಕ ಇನ್ನ್ ಹಲವಾರ್ ಸಾಂಸ್ಕೃತಿಕ ಕಾರ್ಯಕ್ರಮಗ ನಡ್ತ್, ಭಾಷಾ ಬಾಂದವ್ಯ ಸಂವಾದಾ ಕಾರ್ಯಕ್ರಮನು ಇತ್ತ್.

ಪೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜ್‌ನವರೆಗೆ ಎಲ್ಲಾ ಅಕಾಡೆಮಿಗಳ ಸಾಂಸ್ಕೃತಿಕ ಮೆರವಣಿಗೆಯನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮಲಿ ಕಲಾಶಿಬಿರ, ಶಿಲ್ಪಕಲಾ ಪ್ರದರ್ಶನ, ಪುಸ್ತಕ ಪ್ರದರ್ಶನ ಮತ್ತೆ ಮಾರಾಟ, ವಸ್ತು ಪ್ರದರ್ಶನ, ವಿವಿಧ ಅಕಾಡೆಮಿಗಳ ಪುಸ್ತಕ ಮತ್ತೆ ಸಿ.ಡಿ ಬಿಡುಗಡೆನ ಮಾಡ್ದೊ.

5. 10 –11. 12. 2016 ರಂದ್ ಗೌಡ ಯುವ ಸೇವಾ ಸಂಘ ಆಶ್ರಯಲಿ ರಾಜ್ಯಮಟ್ಟದ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಮ್ಮೇಳನ ಗೌಜಿ–2016 ಕೊಡಿಯಾಲ್‌ಬೈಲ್‌ನ ಗೌಡ ಸಮುದಾಯಭವನಲಿ ಎರ್ಪಡಿಸಿದ್ದೊ, ಅಮರಶ್ರೀಭಾಗ್‌ಂದ ಸಂಸ್ಕೃತಿ ಬಿಂಬಿಸುವ ಸ್ತಬ್ಧಚಿತ್ರಗಳೊಂದಿಗೆ ಭವ್ಯ ಮೆರವಣಿಗೆನ ಹಮ್ಮಿಕಂಡಿದ್ದೊ. ಡಾ|ಕೆ.ವಿ.ರೇಣುಕಾಪ್ರಸಾದ್, ಪ್ರಧಾನ ಕಾರ್ಯದರ್ಶಿಗ, ಎ.ಓ.ಎಲ್.ಇ (ರಿ) ಸುಳ್ಯ ಇವು ಮೆರವಣಿಗೆನ ಉದ್ಘಾಟನೆ ಮಾಡ್ದೊ, ಶ್ರೀಮತಿ ಆಶಾ ತಿಮ್ಮಪ್ಪಗೌಡ ಇವ್ ಧ್ವಜ ಏರ್ಸಿದೊ, ಉದ್ಘಾಟನೆ ಜಂಬರದ ಅಧ್ಯಕ್ಷತೆನ ಶ್ರೀ ಕೊಲ್ಯದ ಗಿರೀಶ್ ವಹಿಸಿದ್ದೊ, ಉದ್ಘಾಟನೆಯನ್ನು ವಸತಿ ಸಚಿವರಾದ ಶ್ರೀ ಎಂ ಕೃಷ್ಣಪ್ಪ ನೆರವೇರಿಸಿದೊ. ಸಮಾರಂಭಲಿ ಸಂಸದ ಶ್ರೀ ಡಿ.ವಿ.ಸದಾನಂದ ಗೌಡ ಇವು ಅಕಾಡೆಮಿ ಪ್ರಕಟಿಸಿದ ನೆಂಪುಗಳ ರಂಗೋಲಿ ಮತ್ತೆ ಹೊಸ ಬೊದ್ದು ಪುಸ್ತಗಳ್ನ ಬಿಡ್‌ಗಡೆ ಮಾಡ್ದೊ,

ಕರ್ನಾಟಕ ಜಾನಪದ ವಿವಿ ಉಪಕುಲಪತಿಗಳಾದ ಪ್ರೊ.ಕೆ.ಚಿನ್ನಪ್ಪಗೌಡ ಇವು ದಿಕ್ಸೂಚಿ ಭಾಷಣ ಮಾಡ್ದೊ. ಜಿಲ್ಲಾ ಉಸ್ತುವಾರಿ ಸಚಿವ ಶ್ರೀ ಬಿ.ರಮನಾಥ ರೈ, ಸುಳ್ಯ ಶಾಸಕ ಶ್ರೀ ಎಸ್.ಅಂಗಾರ, ಶಾಶಕ ಶ್ರೀ ಕೊಂಬಾರನ ಜಿ.ಬೋಪಯ್ಯ, ಶಾಸಕ ಶ್ರೀ ವಾಸು, ಎ.ಓ.ಎಲ್.ಇ (ರಿ) ಸುಳ್ಯ ಇದರ ಪ್ರಧಾನ ಕಾರ್ಯದರ್ಶಿ ಡಾ|ಕೆ.ವಿ.ರೇಣುಕಾಪ್ರಸಾದ್ ಶ್ರೀ ಕುಕ್ಕೆಸುಬ್ರಹ್ಮಣ್ಯ ದೇವಸ್ಥಾನ ಇದರ ವ್ಯವಸ್ಥಪನಾ ಸಮಿತಿ ಅಧ್ಯಕ್ಷರ್ ಶ್ರೀ ನಿತ್ಯಾನಂದ ಮುಂಡೋಡಿ ಇವು ಮುಖ್ಯ ನೆಂಟ್ರಾಗಿ ಭಾಗವಹಿಸಿದ್ದೊ, ಶ್ರೀ ಚನಿಯ ಕಲ್ತಡ್ಕ, ಶ್ರೀ ಹರೀಶ್ ಕಂಜಿಪಿಲಿ, ಶ್ರೀಮತಿ ಶೀಲಾವತಿ ಮಾಧವ, ಶ್ರೀ ಹರೀಶ್ ರೈ ಉರಡ್ಕ, ಶ್ರೀ ಎಂ.ವೆಂಕಪ್ಪಗೌಡ, ಶ್ರೀ ಧನಂಜಯ ಅಡ್ಪಂಗಾಯ, ಶ್ರೀ ಟಿ.ಎಂ.ಶಹೀದ್ ಇವು ಉಪಸ್ಥಿತರಿದ್ದೊ.

ಕಾರ್ಯಕ್ರಮಲಿ ಅರೆಭಾಷಿಕ ಸಮುದಾಯ ಗತಿ–ಸ್ಥಿತ್ಯಂತರ ವಿಷಯದ ಬಗ್ಗೆ ವಿಚಾರಗೋಷ್ಠಿ, ಅರೆಭಾಷೆ ಕವಿಗೋಷ್ಠಿಗಳು ನಡೆದವು, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸ್ಥಿತ್ಯಂತರಗ–ಸಾಧ್ಯತೆಗ ವಿಸಯದ ಬಗ್ಗೆ ವಿಚಾರಗೋಷ್ಠಿ, ಸಾಮಾಜಿಕ ಸ್ಥಿತ್ಯಂತರಂಗ–ಸಮಕಾಲೀನ ಸ್ಪಂದನೆ ವಿಸಯದ ಬಗ್ಗೆ ವಿಚಾರಗೋಷ್ಠಿಗಳು ನಡೆದವು, ಸಮಾರೋಪ ಜಂಬರಲಿ ಶ್ರೀ ಪದ್ಮಾ ಕೋಲ್ಚಾರ್ ನವು ಸಮಾರೋಪ ಭಾಷಣ ಮಾಡ್ದೊ, ಸಮಾಜ ಕಲ್ಯಾಣ ನಿಗಮ ಅಧ್ಯಕ್ಷರಾದ ಶ್ರೀಮತಿ ದಿವ್ಯಪ್ರಭಾ ಚಿಲ್ತಡ್ಕ, ಎ.ಪಿ.ಎಂ.ಸಿ ಸುಳ್ಯ ಹಾಗೂ ಗಣ್ಯ ವ್ಯಕ್ತಿಗಳಾದ ಶ್ರೀ ಜಾಕೆ ಮಾಧವ ಗೌಡ, ಶ್ರೀ ಎಸ್.ಎನ್.ಮನ್ಮಥ, ಶ್ರೀಮತಿ ಪುಷ್ಪಾವತಿ ಬಾಳಿಲ, ಶ್ರೀ ಎಸ್.ಐ.ಭಾವಿಕಟ್ಟಿ, ಶ್ರೀ ದಂಬೆಕೋಡಿ ಆನಂದ, ಶ್ರೀ ಪೇರಿಯನ ಜಯಾನಂದ, ಶ್ರೀ ಹರಪ್ರಸಾದ್, ಶ್ರೀ ಪಿ.ಬಿ.ದಿವಾಕರ ರೈ, ಶ್ರೀ ಅಬ್ಬಾ ಹಾಜಿ ಕಟ್ಟೆಕಾರ್ಸ್, ಶ್ರೀ ವಿಲಿಯಂ ಲಸ್ರಾದೋ ಇವು ಮುಖ್ಯ ನೆಂಟ್ರಾಗಿ ಕಾರ್ಯಕ್ರಮಲಿ ಭಾಗವಹಿಸಿದ್ದೊ, "ಓಂ ನಮ:ಶಿವಾಯ" ಯಕ್ಷಗಾನ, "ನೃತ್ಯರೂಪಕ" ಅರೆಭಾಷೆ ಸಾಂಸ್ಕೃತಿಕ ಸಂಭ್ರಮ, "ನೃತ್ಯ ವೈಭವ" ವೀರ ಪರಂಪರೆ, "ಕೋಲಾಟ" ಸಾಂಸ್ಕೃತಿಕ ಮತ್ತು ಜಾನಪದ ಮನರಂಜನಾ ಕಾರ್ಯಕ್ರಮಗ, ಅರೆಭಾಷೆ ಸಂಗೀತ ಸುಧೆ ಕಾರ್ಯಕ್ರಮ ನಡ್ದೊ. ವಿಶೇಷ ಆಕರ್ಷಣೆ ಆಗಿ ಶ್ವಾನ ಪ್ರದರ್ಶನ ಮತ್ತೆ ವಸ್ತು ಪ್ರದರ್ಶನಗ ಇದ್ದೊ, ಶ್ರೀ ಸದಾನಂದ ಮಾವಜಿ ಮತ್ತೆ ಶ್ರೀ ಬಿ.ಸಿ.ವಸಂತ ಇವು ಕಾರ್ಯಕ್ರಮದ ಸಂಚಾಲಕರಾಗಿ ಕಾರ್ಯನಿರ್ವಹಿಸಿ

6. 15.12.2016 ರಂದ್ ಅರೆಭಾಷೆ ಸೌಹಾರ್ದ ದಿನಾಚರಣೆನ ಗೌಡ ಸಮಾಜ, ಮಡಿಕೇರಿಲಿ ನಡ್ತ್ ಶಾಸಕರ್ ಶ್ರೀ ಕೆ.ಜಿ.ಬೋಪಯ್ಯನವು ಕಾರ್ಯಕ್ರಮನ ಉದ್ಘಾಟನೆ ಮಾಡ್ದೊ, ಶ್ರೀ ಕೊಲ್ಯದ ಗಿರೀಶ್ ಅಧ್ಯಕ್ಷತೆ ವಹಿಸಿದ್ದೊ, ಮುಖ್ಯ ನೆಂಟ್ರಾಗಿ ಶ್ರೀ ದಂಬೆಕೋಡಿ ಆನಂದ ಭಾಗವಹಿಸಿದ್ದೊ, ದಿಕ್ಸೂಚಿ ಭಾಷಣನ ಶ್ರೀ ಎಸ್.ಐ.ಭಾವಿಕಟ್ಟೆಯವು ಮಾಡ್ದೊ, ಶ್ರೀ ಪಟ್ಟಡ ಶಿವಕುಮಾರ್‌ನವು ಅರೆಭಾಷೆ ಸಂಸ್ಕೃತಿ ಬಗ್ಗೆ ಉಪನ್ಯಾಸ ಮಾಡ್ದೊ.

## ಅಕಾಡೆಮಿ ಪ್ರಾಯೋಜಿತ ಕಾರ್ಯಕ್ರಮಗ :

1. ತಾರೀಕ್ 30.09.2016 ರಂದು ಎಬಿವಿ ಸಂಘ-ಚೇರಂಬಾಣೆ ಇವ್ ನಡ್ಸಿದ 10ನೇ ವರ್ಷದ ವಾರ್ಷಿಕೋತ್ಸವ ಕಾರ್ಯಕ್ರಮಕ್ಕೆ ಅಕಾಡೆಮಿಂದ ಅರೆಬಾಸೆ ಜಾನಪದ ಕೋಲಾಟ ತಂಡನ ಪ್ರಾಯೋಜಿಸಿದ್ದೊ.
2. ತಾರೀಕ್ 11.10.2016ರಂದು ವಿಜಯದಶಮಿ ಪ್ರಯುಕ್ತ ನಡ್ದ ದಸರಾ ಜನೋತ್ಸವ ಕಾರ್ಯಕ್ರಮಕ್ಕೆ ಅಕಾಡೆಮಿಂದ ಯಕ್ಷಗಾನ ಮತ್ತೆ ಅರೆಬಾಸೆ ಸಾಂಸ್ಕೃತಿಕ ನೃತ್ಯ ತಂಡನ ಪ್ರಾಯೋಜಿಸಿದ್ದೊ.
3. ತಾರೀಕ್ 15.10.2016 ರಂದು ಸವಣೂರ್ಲಿ ನಡ್ದ "ಕಲಾರಶ್ಮಿ-2016" ಕಾರ್ಯಕ್ರಮಕ್ಕೆ ಸಿದ್ದವೇಷ ಹಂಗೆ ಸಾಂಸ್ಕೃತಿಕ ಕಲಾತಂಡನ ಪ್ರಾಯೋಜಿಸಿದ್ದೊ. ದಸರಾ ಕವಿಗೋಷ್ಠಿಗೂ ಅಕಾಡೆಮಿ ಪ್ರಾಯೋಜಕತ್ವ ನೀಡ್ದೊ.
4. ತಾರೀಕ್ 05.11.2016 ರಂದ್ ಸುಳ್ಯ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಇವು ಸ.ಪ.ಪೂ ಕಾಲೇಜು ಸುಳ್ಯ ಇಲ್ಲಿ ನಡ್ಸಿದ "ಚಿತ್ರಕಲಾ ಸಂಭ್ರಮ" ಕಾರ್ಯಕ್ರಮ ಅಕಾಡೆಮಿ ಪ್ರಾಯೋಜಕತ್ವಲಿ ನಡ್ತ್.
5. ತಾರೀಕ್ 14.11.2016 ರಂದ್ ಮೋಡಲ್ ಎಜುಕೇಷನ್ ಟ್ರಸ್ಟ್ (ರಿ) ಸುಳ್ಯ ಇವು ನಡ್ಸಿದ ಗ್ರೀನ್ ವ್ಯೂ ಮಕ್ಕಳ ಹಬ್ಬ-2016 ಕಾರ್ಯಕ್ರಮನ ಸಾಂಸ್ಕೃತಿಕ ಕಲಾತಂಡ ಪ್ರಾಯೋಜಿಸಿದ್ದೊ.
6. ತಾರೀಕ್ 14.11.2016 ರಂದ್ ಬಾಲಭವನ ಕಬ್ಬನ್ ಪಾರ್ಕ್ ಬೆಂಗಳೂರು ಇಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆವತಿಂದ ನಡ್ಸಿದ 2016 ಮಕ್ಕಳ ಹಬ್ಬ ಕಾರ್ಯಕ್ರಮಕ್ಕೆ ಯಕ್ಷಪ್ರತಿಭಾ ದರ್ಶನ ಮತ್ತು ಅರೆಭಾಷೆ ಜಾನಪದ ನೃತ್ಯಕ್ಕೆ ಮಕ್ಕಳ ತಂಡನ ಪ್ರಾಯೋಜಿಸಿದ್ದೊ.
7. ತಾರೀಕ್ 30.11.2016 ರಂದ್ ವಿರಾಜಪೇಟೆ ಕನ್ನಡ ಸಾಹಿತ್ಯ ಪರಿಷತ್ ಇದರ 7ನೇ ಕನ್ನಡ ಸಾಹಿತ್ಯ ಸಮ್ಮೇಳನ ಕಾರ್ಯಕ್ರಮಕ್ಕೆ ಸಾಂಸ್ಕೃತಿಕ ಕಲಾತಂಡನ ಪ್ರಾಯೋಜಿಸಿದ್ದೊ.
8. ತಾರೀಕ್ 14.12.2016ರಂದು ಶ್ರೀ ಓಂಕಾರೇಶ್ವರ ದೇವಸ್ಥಾನ ಸಮಿತಿಯವು ಕೋಟೆ ಆವರಣಲಿ ನಡ್ಸಿದ ಹುತ್ತರಿ ಹಬ್ಬ ಕಾರ್ಯಕ್ರಮಕ್ಕೆ ಕೋಲಾಟ ತಂಡನ ಪ್ರಾಯೋಜಿಸಿದ್ದೊ
9. ತಾರೀಕ್ 23.12.2016 ರಂದ್ ಮಂಗಳೂರ್‌ಲಿ ನಡ್ದ ಕರಾವಳಿ ಉತ್ಸವ ಕಾರ್ಯಕ್ರಮದ ಮೆರವಣಿಗೆಗೆ ಸಾಂಸ್ಕೃತಿಕ ಕಲಾತಂಡನ ಪ್ರಾಯೋಸಿದ್ದೊ.
10. ತಾರೀಕ್ 26.12.2013 ರಂದ್ ಸುಳ್ಯ ನಡ್ದ ಕೆ.ವಿ.ಜಿ.ಸುಳ್ಯ ಹಬ್ಬ ಕಾರ್ಯಕ್ರಮದ ಮೆರವಣಿಗೆಗೆ ಸಾಂಸ್ಕೃತಿಕ ಕಲಾತಂಡನ ಪ್ರಾಯೋಜಿಸಿದ್ದೊ.
11. ಮಡಿಕೇರಿ ಆಕಾಶವಾಣಿಲಿ ಪ್ರಸಾರ ಆಗ್‌ವ ಸುದ್ದಿಜೊಂಪೆ ಅರೆಭಾಷಾವಾರ್ತೆಗೆ ಅಕಾಡೆಮಿ ಪ್ರಾಯೋಜಕತ್ವ ನೀಡ್ತಾವುಟ್ಟು.

## ಲೇಖಕರ ವಿಳಾಸ :

1. **ಕುತ್ಯಾಳ ನಾಗಪ್ಪ ಗೌಡ (ಕಿರಣ),**
ಕಿರಣ ಕುಟೀರ, ಸುಳ್ಯ, ಸುಳ್ಯ, ದ.ಕ. 574239,

2. **ಡಾ. ಪ್ರಭಾಕರ ಶಿಶಿಲ,**
ನಿವೃತ ಪ್ರಾಂಶುಪಾಲರು, 'ಕಾವ್ಯ' ಕಾಂತಮಂಗಲ,
ಅಜ್ಜಾವರ, ಸುಳ್ಯ, ದ.ಕ. –574239

3. **ಎಂ.ಜಿ. ಕಾವೇರಮ್ಮ,** 'ನಿಸರ್ಗ', ಸುಳ್ಯ, ಸುಳ್ಯ, ದ.ಕ – 574239,

4. **ಭವಾನಿಶಂಕರ ಅಡ್ತಲೆ,**
ಕೆ.ವಿ.ಜಿ ಐ.ಟಿ.ಐ, ಸುಳ್ಯ ದ.ಕ. ಕುರುಂಜಿಭಾಗ್– 574327

5. **ಕಟ್ರತನ ಲಲಿತಾ ಅಯ್ಯಣ್ಣ,**
'ಅನುಗ್ರಹ' ಗೌಳಿಬೀದಿ, ಮಡಿಕೇರಿ –571201

6. **ಶ್ರೀಮತಿ ಹೇಮಲತಾ ಗಣೇಶ್,**
ಕಜೆಗದ್ದೆ ಮನೆ, ಕನಕಮಜಲು ಅಂಚೆ, ಸುಳ್ಯ, ದ.ಕ. –574223

7. **ಭವಾನಿಶಂಕರ ಹೆಚ್.ಬಿ.**
6ನೇ ಬ್ಲಾಕ್, ವಿದ್ಯಾರಣ್ಯಪುರ, ಬಿ.ಇ.ಎಲ್ ಲೇಔಟ್ ಬೆಂಗಳೂರು–560097

8. **ಉಳುವಾರನ ರೋಶನ್ ವಸಂತ್,**
ಕಾಂತೂರು ಮೂರ್ನಾಡು, ಮಡಿಕೇರಿ, ಕೊಡಗು

9. **ರಮ್ಯಶ್ರೀ,** ನಡುಮನೆ, ಸೋಣಂಗೇರಿ, ಸುಳ್ಯ ,ದ.ಕ. – 574239

10. **ಲೋಹಿತಾಶ್ವ ಕ್ಕೊಂಗಾಜೆ,**
ಕೋಲ್ಚಾರ್ ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ, ದ.ಕ.

11. **ಯೋಗೀಶ್ ಹೊಸೊಳಿಕೆ,** ಗುತ್ತಿಗಾರು, ಸುಳ್ಯ, ದ.ಕ. –574218

12. **ಶ್ರೀಮತಿ ಸ್ಮಿತಾ ಅಮೃತ್‌ರಾಜ್**
ಸಂಪಾಜೆ, ಬಾಲೆಂಬಿ, ಚೆಂಬು ಗ್ರಾಮ, ಮಡಿಕೇರಿ, ಕೊಡಗು

13. **ಶ್ರೀಮತಿ ಶೀಲಾ ಸೀತಾರಾಂ** ಸುಳ್ಯ, ಸುಳ್ಯ, ದ.ಕ. – 574239

14. **ಯು. ಸುಬ್ರಾಯ ಗೌಡ,**
ಪ್ರಾಚಾರ್ಯರು, 'ಪದ್ಮಶ್ರೀ' ವಿದ್ಯಾನಗರ ಸುಳ್ಯ ದ.ಕ. – 574239

15. **ಶ್ರೀಮತಿ ಲೀಲಾ ದಾಮೋದರ**

'ಧಾತ್ರಿ' ವಲಯ ಅರಣ್ಯ ಕಛೇರಿ ಬಳಿ ಗಾಂಧಿನಗರ, ಸುಳ್ಯ ,ದ.ಕ.– 574239

16. **ಬಾರಿಯಂಡ ಜೋಯಪ್ಪ,**

ಮದೆ, ಮಡಿಕೇರಿ, ಕೊಡಗು.

17. **ಉಳುವಾರನ ರಾಣಿ ವಸಂತ್,**

ಕಾಂತೂರು ಮೂರ್ನಾಡ್, ಮಡಿಕೇರಿ – ಕೊಡಗು

18. **ಹರಿಶ್ಚಂದ್ರ ಮೇಲಡ್ತಲೆ,**

ಕಾಯತ್ರೋಡಿ, ಸುಳ್ಯ, ದ.ಕ. – 574239

19. **ಶ್ರೀಮತಿ ಸರೋಜ ಎಂ.ಟಿ.**

'ಸ್ಫೂರ್ತಿ' 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಸುಳ್ಯ, ದ.ಕ. – 574239

20. **ಚಂಗಪ್ಪ ಹೆಚ್. ಆರ್.**

ಹೊಳೆಕೆರೆ ಮನೆ, ನಂ –30, 3ನೇ ಹೆಚ್‌ಕ್ರಾಸ್, ರುಕ್ಮಿಣಿ ನಗರ,

ನಾಗಸಂದ್ರ –ಬೆಂಗಳೂರು.

21. **ಕೊಕ್ಕಲೆ ರುಕ್ಮಣಿ ಮುತ್ತಪ್ಪ,**

ಹೆರವನಾಡು ಗ್ರಾಮ, ಅಪ್ಪಂಗಡ, ಮಡಿಕೇರಿ, ಕೊಡಗು.

22. **ಶ್ರೀಮತಿ ಯಶೋದಾ ರಾಘವ,**

ಬಾಲಿಕಲ ಸುಳ್ಯ,ದ.ಕ– 574239

* * * * *

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ (2014)

ಸರಕಾರಿ ಅಧಿಸೂಚನೆ ಸಂಖ್ಯೆ: ಕಸಂವಾ 817 ಕಸಧ 2013; ದಿನಾಂಕ 13.08.2014

ಅಧ್ಯಕ್ಷರು:

**ಶ್ರೀ ಕೊಲ್ಯದ ಗಿರೀಶ್**, ಮದೆ ಗ್ರಾಮ, ಮದೆ ಅಂಚೆ, ಮಡಿಕೇರಿ ತಾಲೂಕ್ 571 201 ದೂ: 08272-236515 ಮೊಬೈಲ್ : 9448156599.

ರಿಜಿಸ್ಟ್ರಾರ್:

**ಶ್ರೀ ಉಮರಬ್ಬ**, ಎಂ.ಎಂ. ಮಂಜಿಲ್, ಈದಾಯತ್ ನಗರ, ಕೋಟೆಕಾರ್, ಮಂಗಳೂರು, ಮೊಬೈಲ್ : 9481149135

ಅರ್ಹ ಸದಸ್ಯರು:

**ಶ್ರೀ ಎಲ್.ಎನ್. ಕುಳ್ಳಯ್ಯ**, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಡಿಕೇರಿ,

ಸದಸ್ಯರು :

**ಡಾ. ಪೂವಪ್ಪ ಕಣಿಯೂರು** ಸ್ಫೂರ್ತಿ 4ನೇ ಅಡ್ಡರಸ್ತೆ, ದಕ್ಷಿಣ ಬೀರಮಂಗಲ, ಚರ್ಚ್ ರೋಡು, ಸುಳ್ಯ ದ.ಕ. ದೂರವಾಣಿ : 08257-232885/9448984485, pkaniyoor@gmail.com

**ಡಾ. ಕೋರನ ಸರಸ್ವತಿ ಪ್ರಕಾಶ್** ಸಹ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ವಿರಾಜಪೇಟೆ, ಕೊಡಗು ಮೊಬೈಲ್ : 9483826271

**ಶ್ರೀ ಮೋಹನ್ ಸೋನ ಸೋಣಂಗೇರಿ** ನಡುಮನೆ, ಜಾಲ್ಸೂರು, ಸುಳ್ಯ ತಾಲೂಕು ದ.ಕ.- 574239 ಮೊಬೈಲ್ : 9448791799

**ಶ್ರೀಮತಿ ಸಂಗೀತಾ ರವಿರಾಜ್**, ಹೊಸೂರು ಮನೆ, ಬಾಲೆಂಬಿ ಅಂಚೆ, ಚೆಂಬು, ಮಡಿಕೇರಿ- 574234 ಮೊಬೈಲ್ 7259135346

**ಶ್ರೀ ಯಶವಂತ ಕುಡೆಕಲ್**, ಕುಂಬೆತ್ತಿ ಬನ, ದುಗ್ಗಲಡ್ಕ, ಸುಳ್ಯ ದ.ಕ. -574239 ಮೊಬೈಲ್ : 9481180519

**ಶ್ರೀ ವಸಂತ ಬಿ.ಸಿ.**, ಬಾಕಿಲ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9449999354

**ಶ್ರೀ ಬೋಜಪ್ಪ ಗೌಡ ಎಂ.** ಮದುವೆ ಗದ್ದೆ, ಉಬರಡ್ಕ ಮಿತ್ತೂರು, ಸುಳ್ಯ ತಾಲೂಕು ದ.ಕ.- 574248 ಮೊಬೈಲ್ : 7760782925

**ಶ್ರೀ ಸದಾನಂದ ಗೌಡ ಮಾವಜಿ**, ಮಂಡೆಕೋಲು, ಸುಳ್ಯ ತಾಲೂಕು ದ.ಕ.-574239 ಮೊಬೈಲ್ : 9448164638

**ಶ್ರೀ ಮೋಹನ್‌ದಾಸ್ ಮಂದ್ರೀರ**, ಹೊಸ್ಕೇರಿ ಗ್ರಾಮ, ಮರಗೋಡು, ಮಡಿಕೇರಿ, ಮೊಬೈಲ್ : 9448720112

ಸಹಸದಸ್ಯರು:

**ಶ್ರೀ ಕುಡೆಕಲ್ ಸಂತೋಷ್**, ಹೆಮ್ಮತ್ತಾಳು ಗ್ರಾಮ, ಮುಕ್ಕಂದೂರು, ಮಡಿಕೇರಿ ತಾಲೂಕು, ಕೊಡಗು ಮೊಬೈಲ್ : 9972538584, 8762110948

**ಶ್ರೀ ಕಾರ್ಯಪ್ಪ ಪಿ.ಎಸ್.**, ಪುಂಡಿಗದ್ದೆ, ಯೇನೇಕಲ್ ಗ್ರಾಮ, ಸುಳ್ಯ ತಾಲೂಕು ದ.ಕ. ಮೊಬೈಲ್ : 9731197656

**ಶ್ರೀ ಅಣ್ಣಾಜಿ ಗೌಡ ಪೈಲೂರು ಮನೆ**, ಅಮರಮುಡ್ನೂರು ಗ್ರಾಮ, ಸುಳ್ಯ ತಾಲೂಕು ದ.ಕ. - 574212 ಮೊಬೈಲ್ : 94488058748/9164401745



10.12.2016 ಗೌಜಿ–2016, ಭವ್ಯ ಮೆರವಣಿಗೆ– ಸುಳ್ಯ




10.12.2016 ಗೌಜಿ–2016 ರ ಉದ್ಘಾಟನಾ ಸಮಾರಂಭ– ಸುಳ್ಯ



15.12.2016 – ಅರೆಭಾಷಾ ಸೌಹಾರ್ದ ದಿನಾಚರಣೆ– ಮಡಿಕೇರಿ




16.10.2016, ಅರೆಭಾಷೆ ಸಂಸ್ಕೃತಿ ಸಿರಿ–ಉದ್ಘಾಟನೆ– ಚೆಂಬು

HINGARA
Date: 10-2-2017 Kodagu

Arebhashe Quarterly
KARARB/2016/69571

Volume -1, Issue -3
Price : 20/- Pages : 76



26.11.2016–15 ನೇ ಸಾಲ್ನ ಗೌರವ ಪ್ರಶಸ್ತಿ ಪ್ರಧಾನ– ಬೆಂಗಳೂರು



11.12.2016 – ಗೌಜಿ–2016 ಸಮಾರೋಪ – ಸುಳ್ಯ



10.12.2016 ಗೌಜಿ–2016 – ಸಾಂಸ್ಕೃತಿಕ ನೋಟ–ಸುಳ್ಯ

Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA